ವಿಖ್ಯಾತರ
ವ್ಯಕ್ತಿಚಿತ್ರ ಮಾಲೆ

# ಚಾಂದ್ ಬೀಬಿ

ಡಾ. ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್



# ಚಾಂದ್ ಬೀಬಿ

ಡಾ. ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್




ವಸಂತ ಪ್ರಕಾಶನ
ನಂ. 360, 10ನೇ 'ಬಿ' ಮುಖ್ಯರಸ್ತೆ
3ನೇ ಬ್ಲಾಕ್ ಜಯನಗರ, ಬೆಂಗಳೂರು–560 011

**Chand Bibi** *(Kannada)*: a brief biographical sketch by
Dr. Jyotsna Krishnananda Kamath; published by Vasantha Prakashana,
No. 360, 10th 'B' Main, 3rd Block, Jayanagar, Bangalore-560 011,
India. Ph.: 080-22443996
email : vasantha_prakashana@yahoo.com
website : www.vasanthaprakashana.com

First published 2017

Price Rs. 40



ಪ್ರಥಮ ಮುದ್ರಣ : 2017
ಉಪಯೋಗಿಸಿದ ಕಾಗದ : 70 ಜಿಎಸ್‌ಎಂ ಮ್ಯಾಪ್‌ಲಿಥೊ
ಪುಟಗಳು : 96 ಬೆಲೆ : ರೂ. 40

ಮುಖಪುಟ ವಿನ್ಯಾಸ : ಚನ್ನಕೇಶವ
ಚಿತ್ರಕೃಪೆ : ಇಂಟರ್‌ನೆಟ್
ಪುಟ ವಿನ್ಯಾಸ : ವಸಂತ ಪ್ರಕಾಶನ
ಮುದ್ರಣ : ಶ್ರೀರಂಗ ಪ್ರಿಂಟರ್ಸ್

### ವಸಂತ ಪ್ರಕಾಶನದ

# ವಿಖ್ಯಾತರ ವ್ಯಕ್ತಿಚಿತ್ರ ಮಾಲೆ

ವಿಜ್ಞಾನ, ಸಾಹಿತ್ಯ, ಉದ್ಯಮ, ಸಮಾಜ ಸುಧಾರಣೆ, ಕ್ರೀಡೆ ಮೊದಲಾದ ಕ್ಷೇತ್ರಗಳಲ್ಲಿ ಮಹೋನ್ನತ ಸಾಧನೆಗಳನ್ನು ಮಾಡಿರುವ ದೇಶ–ವಿದೇಶಗಳ ಅನೇಕ ಸಾಧಕರ ಅನ್ಯಾದೃಶ ಜೀವನಯಾತ್ರೆಗಳನ್ನು ಚಿತ್ರಿಸುತ್ತವೆ ನಮ್ಮ ಪ್ರಕಾಶನದ 'ವಿಖ್ಯಾತರ ವ್ಯಕ್ತಿಚಿತ್ರ ಮಾಲೆ'ಯ ಕೃತಿಗಳು. ತಮ್ಮ ಅನನ್ಯ ನಡೆಗಳಿಂದ ಸಮುದಾಯಗಳ ಮೇಲೆ ಅಭೂತಪೂರ್ವ ಪ್ರಭಾವ ಬೀರಿರುವ ಈ ಸಾಧಕರು ಉಜ್ವಲವಾಗಿ ಬೆಳಗುವ ನಕ್ಷತ್ರಗಳೇ ಸರಿ. ಇವರೆಲ್ಲರ ಪ್ರಾಮಾಣಿಕ ಪ್ರಯತ್ನಗಳಿಂದ ಎಷ್ಟೋ ಮೂಢ ನಂಬಿಕೆಗಳು ಕಣ್ಮರೆಯಾಗಿವೆ; ಎಷ್ಟೋ ಕಡೆ ಪರಿಸರ ನಾಶವಾಗದೆ ಉಳಿದಿದೆ; ಮೇಲು ಕೀಳೆಂಬ ನಕಾರಾತ್ಮಕ ಭಾವನೆಗಳು ಅದೆಷ್ಟೋ ಕಡೆ ತಗ್ಗಿವೆ. ಅಲ್ಲದೆ, ಇವರ ಬದುಕಿನಿಂದ ಸ್ಫೂರ್ತಿ ಪಡೆದ ಅದೆಷ್ಟೋ ಯುವಕ–ಯುವತಿಯರು ಗಮನಾರ್ಹ ಸಾಧನೆಗಳನ್ನು ಮಾಡಿದ್ದಾರೆ. ತಾವು ಬದ್ಧರಾದ ತಮ್ಮ ತತ್ವಗಳಿಗೆ, ಗುರಿಗಳಿಗೆ ತಮ್ಮ ಇಡೀ ಬದುಕನ್ನೇ ನಿಸ್ಪೃಹರಾಗಿ ಅರ್ಪಿಸಿದ ಈ ಸಾಧಕರ ಜೀವನಗಾಥೆಗಳು ನಿಜಕ್ಕೂ ಮನನೀಯವಾದವು, ಅನುಕರಣೀಯವಾದವು. ಎಲ್ಲ ವರ್ಗದ ಓದುಗರಿಗೆ ಅದರಲ್ಲೂ ವಿಶೇಷವಾಗಿ ವಿದ್ಯಾರ್ಥಿವೃಂದಕ್ಕೆ ಹಾಗೂ ತರುಣ–ತರುಣಿಯರಿಗೆ ಮನೋ ವಿಕಾಸವನ್ನೂ ಅನಂತ ಸಾಧ್ಯತೆಗಳ ಚಿಂತನೆಗಳನ್ನೂ ಆದರ್ಶದ ಪಾಠವನ್ನೂ ಒದಗಿಸುವ ಈ ಸಾಧಕರ ಜೀವನ ಚರಿತ್ರೆಗಳನ್ನು ಸರಳವಾಗಿ ಹಾಗೂ ಕಡಿಮೆ ಬೆಲೆಯಲ್ಲಿ ಒದಗಿಸಬೇಕೆಂಬ ನಮ್ಮ ಆಶಯಕ್ಕೆ ಪೂರಕವಾಗಿ ಈ ಕೃತಿಗಳು ಮೈದಾಳಿವೆ.

ಸ್ವಾಮಿ ವಿವೇಕಾನಂದ, ಡಾ. ಎಸ್. ರಾಧಾಕೃಷ್ಣನ್, ಜವಾಹರಲಾಲ್ ನೆಹರೂ, ಸುಭಾಷ್‌ಚಂದ್ರ ಬೋಸ್, ಶ್ರೀ ಕೃಷ್ಣದೇವರಾಯ, ಶ್ರೀನಿವಾಸ ರಾಮಾನುಜನ್, ಸರ್ ಐಸಾಕ್ ನ್ಯೂಟನ್, ಆಲ್ಬರ್ಟ್ ಐನ್‌ಸ್ಟೈನ್, ಮದರ್ ತೆರೆಸಾ, ಡಾ. ಬಿ. ಆರ್. ಅಂಬೇಡ್ಕರ್, ಸರ್ ಎಂ. ವಿಶ್ವೇಶ್ವರಯ್ಯ, ಪಂ ಭೀಮಸೇನ ಜೋಶಿ, ಎಂ.ಎಸ್. ಸುಬ್ಬುಲಕ್ಷ್ಮಿ, ಚಾರ್ಲಿ ಚಾಪ್ಲಿನ್, ವಾಲ್ಟ್ ಡಿಸ್ನಿ, ವಿಶ್ವನಾಥನ್ ಆನಂದ್, ಸಚಿನ್ ತೆಂಡೂಲ್ಕರ್, ಕ್ಯಾಪ್ಟನ್ ಗೋಪಿನಾಥ್, ಮೇಧಾ ಪಾಟ್ಕರ್, ಬಾಬಾ ಆಮ್ಟೆ, ಹೀಗೆ ಇನ್ನೂ ಅನೇಕ ಸಾಧಕರು ಮಾಡಿರುವ ಅರ್ಥಪೂರ್ಣ ಕೆಲಸಗಳನ್ನು, ಅವರ ಚಿಂತನೆಗಳನ್ನು ಹಾಗೂ ಅವರು ಪಟ್ಟ ಪರಿಶ್ರಮಗಳನ್ನು ಮಾಲೆಯ ಒಂದೊಂದು ಕೃತಿಗಳೂ ಕಟ್ಟಿಕೊಡಲು ಯತ್ನಿಸುತ್ತವೆ. ಈ ಕೃತಿಗಳು ನಮ್ಮ ವಿದ್ಯಾರ್ಥಿವೃಂದದಲ್ಲಿ ಹಾಗೂ ಯುವ ಸಮುದಾಯದಲ್ಲಿ ಸಕಾರಾತ್ಮಕ ಪ್ರೇರಣೆಗಳನ್ನು ಪಡಿಮೂಡಿಸಿದರೆ ನಮ್ಮ ಶ್ರಮ ಸಾರ್ಥಕ. ನಮ್ಮ ಆಶಯಕ್ಕೆ ಸ್ಪಂದಿಸಿ ಮಾಲೆಯ ಕೃತಿಗಳನ್ನು ರಚಿಸಿಕೊಟ್ಟಿರುವ ಎಲ್ಲ ಲೇಖಕ-ಲೇಖಕಿಯರಿಗೆ ನಮ್ಮ ಧನ್ಯವಾದಗಳು.

**–ಪ್ರಕಾಶಕರು**

# ಒಳಪುಟಗಳಲ್ಲಿ

# 1

ಬಿಜಾಪುರದಲ್ಲಿ 1579ರ ವೈಶಾಖದ ಕಡುಬೇಸಿಗೆಯ ಹುಣ್ಣಿಮೆ ರಾತ್ರಿ. ಇಬ್ಬರು ಅಶ್ವಾರೋಹಿಗಳು ತಮ್ಮ ಕಾವಲು ಪಡೆಯೊಡನೆ ಅರಮನೆಯಿಂದ ಹೊರಟು, ಕೋಟೆ, ಕೊತ್ತಳ ದಾಟಿ, ಊರಿನ ಪ್ರದೇಶವನ್ನು ದಾಟಿ ಮೂರು ಕೋಶ ದೂರ ಹೋಗಿದ್ದಾರೆ. ಒಬ್ಬ ಅಶ್ವಾರೋಹಿ, ಹಿಂಬಾಲಿಸುತ್ತಿದ್ದ ಕಾವಲುಪಡೆಯನ್ನು ಕಣ್ಸನ್ನೆಯಿಂದ, ಅಲ್ಲೇ ಇರಹೇಳಿ, ಉದ್ಯಾನವೊಂದನ್ನು ಪ್ರವೇಶಿಸಿದ. ಜೊತೆಗಿದ್ದ ವ್ಯಕ್ತಿ ಅನುಸರಿಸಿತು. ಅಲ್ಲಿ ಕುದುರೆಯನ್ನು ನಿಲ್ಲಿಸಿದ ಆ ಅಶ್ವಾರೋಹಿ, “ಚಾಂದ್, ಈಗ ನಿನಗೊಂದು ಚಮತ್ಕಾರ ಕಾದಿದೆ! ನೀನು ಕಣ್ಣು ಕಟ್ಟಿಕೊ!” ಎಂದು ಅಕ್ಕರೆಯ ದರ್ಪದಿಂದ ಹೇಳಿದ. ಚಾಂದ್ ಬೀಬಿ, ನಗುನಗುತ್ತಲೇ ತನ್ನ ಕಿರಿಯ ರೇಶ್ಮೆ ಶಾಲನ್ನು ಕಣ್ಣಿಗೆ ಕಟ್ಟಿಕೊಂಡಳು. “ಇಲ್ಲ! ನೀನು ಕಟ್ಟಿಕೊಂಡದ್ದು ಸರಿಯಾಗಿಲ್ಲ!” ಎನ್ನುತ್ತ ಮೊದಲ ಅಶ್ವಾರೋಹಿ ತಾನೆ ಅವಳ ಕುದುರೆ ಹತ್ತಿ ಅವಳನ್ನು ತಬ್ಬಿಹಿಡಿದು, ಕೂದಲು ಸರಿಪಡಿಸಿ, ಸರಿಯಾಗಿ ಕಣ್‌ಕಟ್ಟಿದ. ನಿಧಾನವಾಗಿ ಕುದುರೆಯನ್ನು ನಡೆಸುತ್ತ ಹೆಬ್ಬಾಗಿಲೆಂದು ಭಾಸವಾದ ಕಟ್ಟಡದ ಒಳಗೆ ಕರೆದೊಯ್ದ. ಜುಳುಜುಳು

ಹರಿಯುವ ನೀರಿನ ಸದ್ದು ಕೇಳಿಸಿತು.

ಉರಿಬೇಸಿಗೆಯಲ್ಲಿ ಇದ್ದಕ್ಕಿದ್ದಂತೆ ತಂಪಾದ ಗುಹೆಯೊಂದನ್ನು ಸೇರಿದ ಅನುಭವ. ಕುದುರೆ ನಿಂತಿತು. "ಆಹಾಹಾ! ಓಹೋ ಹೋ!" ಉಲ್ಲಾಸದ ಉದ್ಗಾರ, ಚಾಂದ್ ಬೀಬಿಯ ಬಾಯಿಂದ ಬರುತ್ತಲೇ ಇತ್ತು. ಈಗ ಅಲಿ ಆದಿಲ್ ಶಹ, ಮೃದುವಾಗಿ ಕಣ್ಣಿನ ಕಟ್ಟನ್ನು ಸಡಲಿಸಿದ. ಚಾಂದ್ ಬೀಬಿ ಕಂಡ ದೃಶ್ಯದಿಂದ ತನ್ನ ಕಣ್ಣನ್ನೇ ನಂಬದಾದಳು.

ದೊಡ್ಡದಾದ ಕಾರಂಜಿಯೊಂದು ಹತ್ತಾರು ಧಾರೆಗಳಲ್ಲಿ ಎತ್ತರಕ್ಕೆ ಪುಟಿಯುತ್ತ, ಇವರು ನಿಂತ ಎಡೆಯಲ್ಲಿ ಸೀರ್ಪನಿಗಳನ್ನು ಸಿಡಿಸುತ್ತಿದೆ. ಪಕ್ಕದಲ್ಲಿ ತಣ್ಣೀರಿನ ತಟಾಕವೊಂದು ತುಂಬಿ ನೀರಾಟಕ್ಕೆ ಆಮಂತ್ರಿಸುತ್ತಿದೆ. ದೂರದಲ್ಲಿ ಬತೇರಿಯ ಅಂಚು ಅಸ್ಪಷ್ಟವಾಗಿ ಗೋಚರಿಸುತ್ತಿದೆ. ತನಗೆ ಪರಿಚಿತವಿದ್ದ ಬೆಟ್ಟದ ಬದಿಯ ಬೋಳಾದ ಭಾಗವೇ ಆಗಿತ್ತು ಇದು. ನಿಜವೇ? ಕನಸಲ್ಲ ತಾನೆ! ಉಲ್ಲಾಸದಿಂದ ಪತಿಯತ್ತ ಪ್ರಶ್ನಾರ್ಥಕ ನೋಟ ಬೀರಿದಳು. ಆತ ನಸುನಗುತ್ತ, ನಿಧಾನವಾಗಿ ಆಕೆಯನ್ನು ಕುದುರೆಯಿಂದ ಇಳಿಸಿ ಕಾರಂಜಿಯ ಒಂದು ಸುತ್ತು ಹಾಕಿಸಿ ಆದಾಗಲೇ ಸಜ್ಜುಗೊಳಿಸಿದ ಆಸನದತ್ತ ಕೈಹಿಡಿದು, ಕರೆದೊಯ್ದು ಕೂಡ್ರಿಸಿದ.

ಚಾಂದ್ ಬೀಬಿ ಗುಂಗಿನಲ್ಲಿದ್ದಳು. ಅರಮನೆಯ ಈಚೆ ಐದು ಕೋಸಿನಲ್ಲಿ ಒಂದೂ ಜಲಾಶಯ ಇರಲಿಲ್ಲ. ಈ ಜಲರಾಶಿ ಬಂದದ್ದು ಎಲ್ಲಿಂದ? ಎಡಬದಿಗೆ ಹಣಿಕು ಹಾಕುತ್ತಾಳೆ! ಹತ್ತಡಿ ಎತ್ತರದ ಹೌದೊಂದು ಕೋಡಿಯಾಗಿ ಹರಿಯುತ್ತಿರುವ ನೀರಿನಿಂದ ತುಂಬಿದೆ. ಪಕ್ಕದ ಕ್ರೀಡಾ ತಟಾಕಕ್ಕೆ ಅಲ್ಲಿಂದ ನೀರು ಹರಿಯುತ್ತಿದೆ. ಜೊತೆಗೆ ಹತ್ತಾರು ಕಿರಿಕಾಲುವೆಗಳಿಂದ ನಾಲ್ಕು ಕಡೆ ಹರಿಯುವ ವ್ಯವಸ್ಥೆಯೂ ಆಗಿದೆ. ಕೆಲವೇ ತಿಂಗಳಲ್ಲಿ ಈ ಚಮತ್ಕಾರ ಹೇಗೆ ಸಾಧ್ಯವಾಯಿತು? ಇದು ಕನಸೆ? ಕಣ್ಣುಜ್ಜಿಕೊಂಡು ದಿಟ್ಟಿಸಿದಳು. ತನ್ನ ಕೆನ್ನೆಯನ್ನು ಚಿವುಟಿಕೊಂಡಳು. ಎದುರಿಗೆ ಕುಳಿತು ಪತ್ನಿಯ ಬದಲಾಗುತ್ತಲೆ ಇದ್ದ ಮುಖಭಾವವನ್ನು ತದೇಕ ಚಿತ್ತದಿಂದ ಗಮನಿಸುತ್ತ ಒಳಗೊಳಗೆ ನಗುತ್ತಿದ್ದ ಅರಸು ಅಲಿ.

"ಈ ಚಮತ್ಕಾರ ಹೇಗೆ ಸಾಧ್ಯವಾಯಿತು, ದೊರೆ?"

"ಕೀಶ್ವರ್ ಖಾನನು ಈ ಕೆಲಸಕ್ಕೆ ತೊಡಗಿ, ಎರಡು ವರ್ಷವಾಯಿತು. ಕೆಲ ತಿಂಗಳ ಹಿಂದೆ ಬಂಡೆಗಳನ್ನು ಒಡೆಯುವ ಸದ್ದನ್ನು ಕೇಳಿಸಿಕೊಂಡು ಅದು ಏನು ಎಂದು ನೀನು ಕೇಳಿರಲಿಲ್ಲವೆ? ಐದು ಕೋಸು ದೂರದ



ಚಾಂದ್ ಬೀಬಿ

ಸುಂದರ ಹಳ್ಳಿಗೆ ಹಿಂದೊಮ್ಮೆ ನಾವು ಹೋದದ್ದು ನಿನಗೆ ನೆನಪಿರಲು ಸಾಕು. ನಾಲ್ಕಾರು ಹಳ್ಳಗಳು ಹರಿದು ಹೋಗುವ ತಾಣವಾಗಿತ್ತು, ಅದು! ಅಲ್ಲಿ ಒಂದು ಆರಾಮ್‌ಬಾಗ್ ಮಾಡಲು ನೀನು ಸೂಚಿಸಿದ್ದಿ. ಬಳಿಕ ನೀನೇ ರಾಜಧಾನಿಗೆ, ಜನರಿಗೆ, ನೀರಿನ ಪೂರೈಕೆ ಏನೇನೂ ಸಾಲದು! ಉದ್ಯಾನ ಬೇಡ, ಬೇಸಿಗೆಯಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಮಾಡೋಣ. ಆಳಬಾವಿಯ ನೀರು ಸೇದಿ, ಹೆಣ್ಮಕ್ಕಳ ರಟ್ಟೆಗಳು, ಸೇದುಹೋಗಿವೆ! ಅಂದಿದ್ದಿ... ನಿನ್ನ ಪ್ರೀತಿಯ ಈ ವಿದ್ಯಾಪುರದಲ್ಲಿ ಇನ್ನು ನೀರಿಗೆ ಕೊರತೆ ಬರಲಾರದು!"

ಚಾಂದ್ ಬೀಬಿ ಪ್ರಶ್ನಾರ್ಥಕವಾಗಿ ಪತಿಯನ್ನು ನೋಡಿದಳು. ಆತ ಮಾತು ಮುಂದುವರಿಸಿದ. "ಆ ಸುಂದರ ಹಳ್ಳಿಯ ನಾಲ್ಕು ಕೋಸಿನಾಚೆಯ

ನಾಲ್ಕಾರು ಚಿಕ್ಕ ದೊಡ್ಡ ಹಳ್ಳಗಳ ನೀರನ್ನು ಹಿಡಿದಿಟ್ಟು ಇಲ್ಲಿ ಹರಿಸುವ ವ್ಯವಸ್ಥೆ ಆಗಿದೆ. ಜೊತೆಗೆ ಮಳೆ ನೀರು ಮತ್ತು ಊರಾಚೆ ಎಂದೂ ಬತ್ತದ ಬಾವಿಗಳ ಝುರಿ ನೀರನ್ನು ಹಿಡಿದಿಟ್ಟು ಭೂಗತ ಕಾಲುವೆಗಳ ಮೂಲಕ ಇತ್ತ ಹರಿಸಲಾಗಿದೆ. ಆ ತೊರಫ್ಷಿಯ ನೀರು ನಿನ್ನ ಕಾಲು ತೊಳೆಯಲು ಇಲ್ಲಿಯ ತನಕ ಬಂದಿದೆ!"

"ತೊರಫ್ಷಿ ಅಲ್ಲ, ಸಾಹೇಬ್! ತೊರವಿ-ತೊರವೆ! ತೊರವೆಯ ಹಳ್ಳ!" ಆದಾಗಲೇ ಕನ್ನಡವನ್ನು ಚೆನ್ನಾಗಿ ಕಲಿತಿದ್ದ ಚಾಂದ್ ನಗುತ್ತ ಗಂಡನನ್ನು ತಿದ್ದಿದಳು.

ಆ ಆರು ತಿಂಗಳಿಂದ ದಂಡನಾಯಕ ಕೀಶ್ವರ್ ಖಾನನು ತನಗೆ ಈ ದಿಕ್ಕಿನಲ್ಲಿ ಹಾಯಗೊಟ್ಟಿರಲಿಲ್ಲ. ಪತಿಯ ಜೊತೆ ಜನ-ಸಂದರ್ಶನಕ್ಕೆ ಹೊರಟಾಗ ಬಳಸುಮಾರ್ಗದಿಂದ ಕರೆದೊಯ್ಯುತ್ತಿದ್ದ ಕಾರಣ, ಈಗ ಚಾಂದ್‌ಗೆ ತಿಳಿಯಿತು. ರಾಜ್ಯದ ವೈರಿಗಳ ಷಡ್ಯಂತ್ರಗಳ ಅರಿವಿದ್ದುದರಿಂದ ಗುಪ್ತ ಸುರಂಗ ಮಾರ್ಗವೊಂದು ತಯಾರಾಗುತ್ತಿದೆ. ಎಂದು ಭಾವಿಸಿದ್ದಳು! ಆಡಳಿತದ ಯಾವ ಸೂಕ್ಷ್ಮ ವಿಚಾರಗಳನ್ನೂ ಪತಿ ತನ್ನಿಂದ ಬಚ್ಚಿ ಇಟ್ಟವರಲ್ಲ. ಆದರೆ ಈ ವಿಚಾರದಲ್ಲೇಕೆ ನಿಷ್ಠುರರಾಗಿ ತನಗೆ ಇತ್ತ ಹಾಯಗೊಡದಂತೆ ಕೀಶ್ವರ್‌ಖಾನನಿಗೆ ಆಜ್ಞಾಪಿಸಿದ್ದರೆಂದು ಆಗ ಅರ್ಥವಾಗದೆ ನೋವಾಗಿತ್ತು. ಈಗ ಆಶ್ಚರ್ಯಾನಂದದಿಂದ ಪತಿಯ ಕೊರಳನ್ನು ತಬ್ಬಿದಳು.

"ನಿನ್ನ ಎರಡೂ ಆಸೆಗಳು ಕೈಗೂಡಿವೆ!"

ಚಾಂದ್ ಪ್ರಶ್ನಾರ್ಥಕವಾಗಿ ನೋಡಿದಳು.

"ಈ ಬಲಬದಿಯ ಹೌದನ್ನು ನೋಡಿದೆಯಾ?"

ಬಲು ದೊಡ್ಡದಾದ ತೆರೆಯೊಂದು ಸುಂದರವಾದ ಕಸೂತಿ ಚಿತ್ರಗಳನ್ನು ಹೊಂದಿ ಏನನ್ನೊ ಮುಚ್ಚಿತ್ತು.

ಚಪ್ಪಾಳೆ ತಟ್ಟಿದ. "ತೆರೆದು ನೋಡು!" ಅಲಿ ಆಜ್ಞಾಪಿಸಿದ. ಅವಳಿಂದ ಆಗಲಿಲ್ಲ. ಎರಡು ಕೈಗಳು ರೇಶ್ಮೆಯ ಹುರಿದಾರವನ್ನು ಮಿಂಚಿನ ವೇಗದಿಂದ ಸರಿಸಿ ಹಿಂದಿನಿಂದ ಮಾಯವಾದವು. ಚಾಂದ್ ಬೀಬಿ ದೃಷ್ಟಿ ಎತ್ತರಿಸಿ ನೋಡಿದಳು.

ಅವಾಕ್ಕಾದಳು.

"ಚಾಂದ್ ಬಾವಡಿ!"

ಮಿರಿ ಮಿರಿ ಮಿಂಚುತ್ತಿದ್ದ ಕರಿ ಕಲ್ಲಿನ ಮೇಲೆ ಬೆಳ್ಳಿಯ ಅಕ್ಷರಗಳಲ್ಲಿ ಕೆತ್ತಲಾಗಿತ್ತು. ಬೃಹತ್ತಾದ ಹೌದೊಂದು ಮೆರೆಯುತ್ತಿತ್ತು. ಆ ಕೂಡಲೇ ಕಾಲುವೆಗಳ ಮೂಲಕ ನೀರು ಉತ್ತರದೆಡೆ ಚಿಮ್ಮಿತು. ವಿದ್ಯಾ(ವಿಜಾ)ಪುರದ ಜಲಾಶಯ! ಈಗ ಆನಂದಾಶ್ರುಗಳನ್ನು ತಡೆದುಕೊಳ್ಳಲಾರದೆ ಚಾಂದ್, ಗಳಗಳನೆ ಅತ್ತುಬಿಟ್ಟಳು. ರಾಜಧಾನಿಯ ಈ ಭಾಗದ ನೀರಿನ ಕೊರತೆಯನ್ನು ತನ್ನ ಅರಸನು ಕಾಯಂ ಇಲ್ಲವಾಗಿಸಿದ್ದ.

ಆಕೆಯ ಕಣ್ಣೀರನ್ನು ಒರೆಸುತ್ತ ಅಲಿ ಹೇಳಿದ, "ಇನ್ನು ಮುಂದೆ ನಿನ್ನ ಕಣ್ಣಿಂದ ಹರಿಯುವ ನೀರು, ಕೇವಲ ಆನಂದಾಶ್ರುಗಳಾಗಿರಬೇಕು! ವಿದ್ಯಾಪುರದ ಜನ ನಿತ್ಯ ಬಳಸುವ ಸಂತೋಷದ ಸ್ವಚ್ಛ ನೀರಿನಂತಿರಬೇಕು."

ಚಾಂದ್ ವಿಸ್ಮಿತಮೂಕಳಾಗಿ ಮೈ ಮರೆತಿದ್ದಳು. ಸಮಯ ಜಾರಿತು. ಈವರೆಗೆ ಬೆಳಗುತ್ತಿದ್ದ ಚಂದಿರನನ್ನು ಮೋಡಗಳು ಆವರಿಸಿದವು. ಮಸುಕು ಕತ್ತಲೆ ಆವರಿಸಿದಂತೆ ಭಾಸವಾಯಿತು. ಮಧ್ಯರಾತ್ರಿ ಮೀರಿತ್ತು. "ಹೋಗೋಣವೆ ದೊರೆ? ಚಂದ್ರನೇಕೊ ಮುನಿಸಿಕೊಂಡಿದ್ದಾನೆ!" ಚಾಂದ್ ಮೌನ ಮುರಿದಳು.

"ಅವನೆಲ್ಲಿ ಹೋಗುವ? ಮತ್ತೆ ಬರುವ, ಚಂದಿರ
ನನ್ನ ಚಾಂದ್‌ಗೆ ಕಣ್ಣು ಮಿಟುಕಿಸುವ!"

ಗುಣಗುಣಿಸುತ್ತ ಅಲಿ, ಪತ್ನಿಯತ್ತ ಕೈ ಚಾಚಿದ. ಇಬ್ಬರೂ ಹಾಡು ಗುನುಗುತ್ತ ಕೈ ಕೈ ಹಿಡಿದು ನಡೆಯುತ್ತ ಕುದುರೆಗಳತ್ತ ಬಂದರು.

ಚಾಂದ್ ಬೀಬಿಯ ಬಾಳಿನಲ್ಲಿ ಮತ್ತೆ ಚಂದಿರ ಉದಯಿಸಲಿಲ್ಲ. ಕೆಲವೇ ದಿನಗಳಲ್ಲಿ ದಂಡಯಾತ್ರೆಯ ಸಿದ್ಧತೆಯಲ್ಲಿದ್ದ ಪತಿ ಅಲಿ ಆದಿಲ್ ಶಹನನ್ನು ಬರೀದ ಶಹನ ಗುಲಾಮನೊಬ್ಬ ಕೊಲೆಮಾಡಿದ್ದ.

## ವೀರ ವನಿತೆ, ಕಲೆಗಳಲ್ಲಿ ನಿಷ್ಣಾತೆ

ಭಾರತದ ಇತಿಹಾಸದಲ್ಲಿ ಮೊಗಲರೊಡನೆ ಕಾದಾಡಿ ಮಡಿದ ಚಾಂದ್ ಬೀಬಿ (ಕ್ರಿ.ಶ. ಸು 1548–1600)ಯ ಹೆಸರು ಪ್ರಸಿದ್ಧವಾಗಿದೆ. ಈಗಿನ ಮಹಾರಾಷ್ಟ್ರ ಪ್ರದೇಶದಲ್ಲಿರುವ ಅಹಮ್ಮದ್ ನಗರವು ನಿಜಾಮ್‌ಶಾಹಿಗಳ ರಾಜ್ಯದ ರಾಜಧಾನಿ ಆಗಿತ್ತು. ಆ ವಂಶದ ಮೂರನೆಯ ಅರಸು ಹುಸೇನ್ ನಿಜಾಮ್ ಶಹ (1552–1565). ಅವನ ಮಗಳಾಗಿದ್ದ ಚಾಂದ್ ಬೀಬಿ

ಕರ್ನಾಟಕದ ಬಿಜಾಪುರದ ಆದಿಲ್‌ಶಾಹಿಗಳ ಸೊಸೆಯಾಗಿ ಬಂದು ಎರಡೂ ನಾಡುಗಳನ್ನು ಬೆಳಗಿದಳು. ಧೈರ್ಯ, ಸ್ಥೈರ್ಯಗಳಲ್ಲಿ ಮಿಗಿಲಾದ ಈಕೆ ಹಲವಾರು ಕಲೆಗಳಲ್ಲಿ ನಿಷ್ಣಾತಳಾಗಿದ್ದಳು. ಪ್ರಜೆಗಳನ್ನು ಪ್ರೀತಿಸಿದಳು. ಅವರ ಕಷ್ಟಗಳಿಗೆ ಸ್ಪಂದಿಸಿದಳು. ಬಿಜಾಪುರವನ್ನು ಸುಂದರ ನಗರವಾಗಿ ಪರಿವರ್ತಿಸಲು ಪತಿ ಅಲಿ ಆದಿಲ್ ಶಹನಿಗೆ (1534–1580) ನೆರವಾದಳು. ಪತಿಯನ್ನು ಕಳೆದುಕೊಂಡ ಬಳಿಕ, ಸಾಕುಮಗ ಇಬ್ರಾಹಿಮನ ಶಿಕ್ಷಣ ತರಬೇತಿಗಳತ್ತ ವಿಶೇಷ ಲಕ್ಷ್ಯ ಪೂರೈಸಿ ಆತ ಆ ವಂಶದಲ್ಲೇ ಶ್ರೇಷ್ಠ ಅರಸನಾಗಿ ರೂಪಗೊಳ್ಳುವಂತೆ ನೋಡಿಕೊಂಡಳು. ತವರು ಮನೆಯಾದ ಅಹಮ್ಮದ ನಗರದಲ್ಲಿ ಆಂತರಿಕ ಕಲಹ–ಅತಂತ್ರತೆಗಳು ಕಾಣಿಸಿಕೊಂಡಾಗ ಮುಂದಾಳುತನ ವಹಿಸಿ, ಶಾಂತಿ ಸ್ಥಾಪಿಸಲು ಹೆಣಗಿದಳು. ತನ್ನ ತಾಯ್ನಾಡನ್ನೇ ಕಬಳಿಸಲು ಬಂದ ಮೊಗಲರ ಸೈನ್ಯವನ್ನು ಹಿಮ್ಮೆಟಿಸಿದಳು. ವೈರಿಗಳಿಂದಲೇ 'ಚಾಂದ್ ಸುಲ್ತಾನಾ' (ಸಾಮ್ರಾಜ್ಞಿ) ಎಂಬ ಮೆಚ್ಚುಗೆಯ ಬಿರುದು ಪಡೆದ ಹೆಗ್ಗಳಿಕೆ ಚಾಂದ್ ಬೀಬಿಯದು. ಆಕೆಗೆ ಅರಬಿಕ್, ಪರ್ಶಿಯನ್, ಟರ್ಕಿಶ್, ಕನ್ನಡ, ಮರಾಠಿಯೂ ಸೇರಿದಂತೆ ಹಲವಾರು ಭಾಷೆಗಳು ಗೊತ್ತಿದ್ದವು. ಸಿತಾರ್ ನುಡಿಸುವುದು ಮತ್ತು ಹೂಗಳ ಮನಮೋಹಕ ಚಿತ್ರಗಳನ್ನು ಬಿಡಿಸುವುದು ಅವಳ ಹವ್ಯಾಸವಾಗಿತ್ತು. ಮಧ್ಯಯುಗದ ದಖ್ಖನದ ರಾಜಕೀಯ, ಇತಿಹಾಸ ಅರಿಯಲು, ಚಾಂದ್ ಬೀಬಿಯ ಜೀವನ–ಸಾಧನೆಗಳು ಸಹಾಯಮಾಡುತ್ತವೆ. ಅದರಂತೆ ಆಕೆ ಬೆಳೆದ ದಖ್ಖನ್ ಪ್ರದೇಶದ ವಿಶಿಷ್ಟ ವಾತಾವರಣ ಹಾಗೂ ಸಂಸ್ಕೃತಿಗಳೂ, ಆಕೆಯ ಬೆಳವಣಿಗೆಗೆ ಕಾರಣವಾಗಿವೆ.

2

# ಸೂಫಿಸಂ-ಬಹಮನಿಗಳ ನೆಲೆಯಾದ ದಖ್ಖನ್ ಪ್ರದೇಶ

ವಿಂಧ್ಯ ಪ್ರದೇಶದ ದಕ್ಷಿಣ ಭಾಗವನ್ನು, ಅಂದರೆ ನರ್ಮದಾ ನದಿಯಿಂದ ದಕ್ಷಿಣದ ಕೃಷ್ಣಾ ನದಿಯವರೆಗೆ ಪೂರ್ವ-ಪಶ್ಚಿಮದ ಕರಾವಳಿಯನ್ನು ಒಳಗೊಂಡ ಪ್ರದೇಶವನ್ನು ಡೆಕ್ಕನ್ ಅಥವಾ ದಖ್ಖನ್ (ಸಂಸ್ಕೃತದ 'ದಕ್ಷಿಣ') ತಪ್ಪಲು ಅಥವಾ ಪ್ರಸ್ತಾರಭೂಮಿ ಎಂದು ಕರೆಯುವದು ವಾಡಿಕೆ. ಕ್ರಿಸ್ತಶಕ ಹದಿಮೂರನೆಯ ಶತಮಾನದ ಹೊತ್ತಿಗೆ ಉತ್ತರ ಭಾರತದಲ್ಲಿ ಮುಸ್ಲಿಮರ ಆಡಳಿತ ಬೇರೂರಿತ್ತು. ಆದರೆ ವಿಂಧ್ಯದ ಈಚೆಗೆ ಅದು ಚಾಚಿರಲಿಲ್ಲ. ಕ್ರೌರ್ಯ, ವಂಚನೆ, ಲೋಭಗಳಿಗೆ ಕುಪ್ರಸಿದ್ಧರಾದ ದಿಲ್ಲಿಯ ಅಲ್ಲಾವುದ್ದೀನ್ ಖಿಲ್ಜಿ (1296–1316) ಮತ್ತು ಆತನ ದಂಡನಾಯಕ ಮಲಿಕ್ ಕಾಫುರ್‌ರು ದೇವಗಿರಿಯ (ದೌಲತಾಬಾದ) ಯಾದವರನ್ನು ಸೋಲಿಸಿ ಅಪಾರವಾದ ಸಂಪತ್ತನ್ನು ಸೂರೆಗೊಂಡದ್ದು ಇತಿಹಾಸದಲ್ಲಿ ದಾಖಲಾಗಿದೆ. ಆ ಬಳಿಕ ಬಂದ ಮಹಮ್ಮದ್ ತುಘಲಕನು (1325–1351) ಹೊಯ್ಸಳರ ಕೊನೆಯ ಅರಸನನ್ನು ಸೋಲಿಸಿ, ರಾಜ್ಯವನ್ನು ವಿಧ್ವಂಸ ಗೊಳಿಸಿ, ದೊಡ್ಡ ಪ್ರಮಾಣದಲ್ಲಿ ಕೊಲೆ-ಸುಲಿಗೆ ನಡೆಸಿದ.

ಈ ಸುಲ್ತಾನನು ಬೆಳೆಯುತ್ತ ಹೋದ ತನ್ನ ಸಾಮ್ರಾಜ್ಯದಲ್ಲಿ ರಾಜಧಾನಿಯಾದ ದಿಲ್ಲಿಯಿಂದ ನಿಯಂತ್ರಣವು ಸಾಧ್ಯವಾಗದೇ ದೌಲತಾಬಾದಕ್ಕೆ ಅದನ್ನು ಸ್ಥಳಾಂತರಿಸಿದ. ಆ ಪ್ರಯೋಗವೂ ಇತಿಹಾಸ ಪ್ರಸಿದ್ಧವಿದೆ. ಸುಲಿಗೆಯ ಸಂಪತ್ತಿನೊಂದಿಗೆ ಸುಲ್ತಾನರು ದೂರದ ದಿಲ್ಲಿಗೆ ಹಿಂದಿರುಗಿದೊಡನೆ, ಅವರು ನೇಮಿಸಿದ ಈ ಪ್ರಾಂತದ ಅಧಿಕಾರಿಗಳು ಸ್ವತಂತ್ರರಾಗಿ ಸರ್ವಾಧಿಕಾರಿಗಳಾಗಿಬಿಡುತ್ತಿದ್ದರು. ಇಲ್ಲವೆ ದಿಲ್ಲಿಯ ವಿರುದ್ಧ ಬಂಡೇಳುತ್ತಿದ್ದರು.

ಹೀಗೆ ಬಂಡಾಯಮಾಡಿ ಸ್ವತಂತ್ರರಾದ ಸಮರ್ಥ ಸರದಾರರಲ್ಲಿ ಅಲ್ಲಾವುದ್ದೀನ ಶಹ ಹಸನಗಂಗು ಬಹಮನಿ (1347–58) ಪ್ರಮುಖನು. ಬಹಮನಿ ವಂಶದ ಸ್ಥಾಪಕನು. ದಕ್ಷಿಣದಲ್ಲಿ ಮೊದಲ ಮುಸ್ಲಿಂ ರಾಜ್ಯ ಸ್ಥಾಪಿಸಿದ ಹಿರಿತನ ಅವನಿಗೆ ಸಲ್ಲುತ್ತದೆ. ಸುಮಾರು ಎರಡು ಶತಮಾನಗಳ ಕಾಲ ದಖ್ಖನ್ ಪ್ರದೇಶವನ್ನು ಆಳಿದ ಬಹಮನಿಗಳ ಕಾಲದಲ್ಲಿ, ಆಡಳಿತ ವಾಸ್ತು, ಕಲೆ, ಶಿಕ್ಷಣ, ಧರ್ಮಗಳ ಪ್ರಸಾರವಾದದ್ದೇ ಅಲ್ಲದೇ ಹಿಂದೂ-ಮುಸ್ಲಿಂ ಮಿತ್ರ ಸಂಸ್ಕೃತಿಯೊಂದು ರೂಪಗೊಂಡು ಶಾಶ್ವತ ದಖ್ಖನಿ ಕುರುಹುಗಳಿಗೆ ನಾಂದಿಯಾಯಿತು. 1347ರಿಂದ 1527ರವರೆಗೆ ಆಳಿದ 18 ಅರಸರಲ್ಲಿ ಕೊನೆಕೊನೆಯವರು ತುಂಬ ದುರ್ಬಲರಾಗಿ ರಾಜ್ಯವು ಒಡೆದು ಐದು ಹೋಳಾಗಿ ಸ್ವತಂತ್ರ ಶಾಹೀ ರಾಜ್ಯಗಳಾದವು.

ಈ ಎರಡು ಶತಮಾನಗಳ ಅವಧಿಯಲ್ಲಿ 'ದಖ್ಖನಿ' ಎಂದು ಕರೆಯಲ್ಪಡುವ ಸಂಸ್ಕೃತಿ ರೂಪಗೊಂಡಿತು. ಈಗಿನ ಮಹಾರಾಷ್ಟ್ರ, ಉತ್ತರ ಕರ್ನಾಟಕ ಮತ್ತು ಆಂಧ್ರದ ಮುಖ್ಯಭಾಗಗಳನ್ನು ತೆಲಂಗಾಣ ಸೇರಿದಂತೆ, ಈ ಪ್ರದೇಶ ಒಳಗೊಂಡಿತ್ತು. ಬಹು ಭಾಷೆ, ಬಹುಕಲೆ, ಬಹುಧರ್ಮಗಳ ನೆಲೆಯಾಗಿತ್ತು. ಎಡಬಿಡದೇ ಮಧ್ಯಪ್ರಾಚ್ಯದ ಬೇರೆ ಬೇರೆ ನಾಡುಗಳಿಂದ ಸಾಹಸಿಗಳು, ಯೋಧರು, ಕುಶಲಕರ್ಮಿಗಳು, ಧಾರ್ಮಿಕರು, ವಿದ್ವಾಂಸರು ಪಶ್ಚಿಮ ಕರಾವಳಿಯ ಚೌಲ್, ದಾಭೋಳ, ಗೋವಾ ಬಂದರುಗಳಿಂದ ಬರಲಾರಂಭಿಸಿದರು. ತುರ್ಕಿ, ಪರ್ಶಿಯನ್‌ರ ಜೊತೆಗೆ ಅದಾಗಲೇ ಪರಿಚಿತರಾಗಿದ್ದ ಅರಬ್ಬೀ ಜನಾಂಗಗಳ ರೀತಿ, ರಿವಾಜುಗಳು ಇಲ್ಲಿಯ ಜನರೊಂದಿಗೆ ಬೆರೆತವು. ಉತ್ತರಭಾರತ ಅಥವಾ ವಿಂಧ್ಯದಾಚೆಯ ನಾಡುಗಳಿಗಿಂತ ಭಿನ್ನವಾಗಿದ್ದ ಬಹಮನಿ ಪ್ರದೇಶದ ಜನರ ಕೊಡುಗೆಗಳು ಬಹಳ.

ಈ ಪ್ರದೇಶಕ್ಕೆ ವಿಶಿಷ್ಟವಾದದ್ದೆಂದು ಗುರುತಿಸಲ್ಪಡುವ ವಾಸ್ತು ಪ್ರಕಾರ ಮತ್ತು ಇತರ ಕಲೆಗಳು ರೂಪಗೊಂಡದ್ದು ಬಹಮನಿಗಳ ಕಾಲದಲ್ಲಿ. ಮಧ್ಯ ಪ್ರಾಚ್ಯದ ಬಹಳಷ್ಟು ಕುಶಲಕಲಾಕಾರರು, ರಾಜಾಶ್ರಯ ಹುಡುಕಿಕೊಂಡೋ, ಸ್ವಯಂ ಪ್ರೇರಣೆಯಿಂದಲೋ ಬಹಮನಿಗಳ ರಾಜಧಾನಿಗಳಾದ ಗುಲ್ಬರ್ಗಾ, ಬೀದರ್‌ಗಳಿಗೆ ಬರುತ್ತಿದ್ದರು. ಧರ್ಮದೊಂದಿಗೆ ಕಲೆ, ಶಿಕ್ಷಣಪ್ರೇಮಿಗಳಾದ ಬಹಮನಿಗಳು ಅವರನ್ನು ಮುಕ್ತಮನಸ್ಸಿನಿಂದ ಪ್ರೋತ್ಸಾಹಿಸಿದರು. ಅಂದು ಮುಖ್ಯ ನಗರಗಳಲ್ಲೆಲ್ಲ ಭದ್ರವಾದ ಕೋಟೆಗಳನ್ನು ಕಟ್ಟಿಸುವದು ಸಾಮಾನ್ಯವಾಗಿತ್ತು. ಕೋಟೆಗಳ ವಿಸ್ತಾರ 3ರಿಂದ 5 ಮೈಲಿಗಳಷ್ಟು ಇರುತ್ತಿತ್ತು. ಕೆಲವೊಮ್ಮೆ ಇಡಿಯ ರಾಜಧಾನಿಯಿದ್ದ ಊರಿಗೇ ಇಂಥ ರಕ್ಷಣೆ ಇರುತ್ತಿತ್ತು. ಬಿಜಾಪುರ ಇಂಥ ಕೋಟೆಯನ್ನು ಹೊಂದಿತ್ತು. ಇದರ ವಿಸ್ತಾರ 15 ಮೈಲಿಗಳಷ್ಟು! ಮಸೀದಿಗಳು, ಪ್ರಾರ್ಥನಾಮಂದಿರಗಳು ಜನರೆಲ್ಲ ಒಟ್ಟಾಗಿ ಸಾಮೂಹಿಕ ಪ್ರಾರ್ಥನೆ ಸಲ್ಲಿಸಲು ಅನುಕೂಲವಾಗುವಂತೆ ವಿಶಾಲ ಪ್ರಾಂಗಣಗಳನ್ನು, ಪ್ರಾರ್ಥನಾ ಗೂಡುಗಳನ್ನು ಹೊಂದಿರುತ್ತಿದ್ದವು.

ಬೀದರದಲ್ಲಿರುವ ಮಹಮ್ಮದ ಗವಾನನ 'ಮದರಸಾ' ಅಥವಾ ಉಚ್ಚವಿದ್ಯಾಲಯದ ಕಟ್ಟಡ ಇಂದಿಗೂ ಬಹಮನಿ ವಾಸ್ತುಕಲೆಯ ಗತವೈಭವವನ್ನು ಸಾರುತ್ತ ನಿಂತಿದೆ. ಪ್ರಶಸ್ತವಾದ ಹೊರಾಂಗಣವನ್ನು ಹೊಂದಿದ ಮೂರು ಅಂತಸ್ತಿನ ಕಟ್ಟಡ. ಅಂದಿನ ವಿಖ್ಯಾತ ಖೊರಾಸಾನ್, ರಬ್ಬರ್‌ಗಳಲ್ಲಿಯ ವಿಶ್ವವಿದ್ಯಾಲಯಗಳ ಮಾದರಿಯಲ್ಲಿ ಕಟ್ಟಲ್ಪಟ್ಟಿದೆ.



ಮದರಸಾ, ಬೀದರ್

ಇಂಥ ಭವ್ಯವಾದ ವಿದ್ಯಾಮಂದಿರವನ್ನು ಮುಂದೆ ಔರಂಗಜೇಬನು ಕ್ರಿ.ಶ. 1657ರಲ್ಲಿ ಬೀದರ್ ರಾಜ್ಯವನ್ನು ಗೆದ್ದಾಗ, ಮದ್ದುಗುಂಡುಗಳ ಗೋದಾಮು ಎಂದು ಬಳಸಿದ! ದುರ್ದೈವದಿಂದ ಮಿಂಚು ಹೊಡೆಯಿತು. ಬೃಹತ್ ಸ್ಫೋಟವಾಗಿ, ಮದರಸಾದ ಹೆಚ್ಚಿನ ಭಾಗ ಹಾಗೂ ಮೂರು ಮಿನಾರ್ (ಗೋಪುರ)ಗಳು ನೆಲಸಮವಾದವು. ಈಗ ಒಂದೇ ಮಿನಾರ್ ಹಾಗೂ ಕೆಲಕೊಠಡಿಗಳು ಉಳಿದುಕೊಂಡಿವೆ.

ಬಹಮನಿಗಳ ಕಾಲದಲ್ಲಿ ದೇಶದ ಇತಿಹಾಸದಲ್ಲಿ ವಿಶೇಷ ಸ್ಥಾನ ಪಡೆದ ಮೂವರು ಮಹನೀಯರನ್ನು ಉಲ್ಲೇಖಿಸಬಹುದು. 1) ಒಬ್ಬಾತ, ದೇಶಿ ಭಾಷೆಯಲ್ಲಿ ಜನಸಾಮಾನ್ಯರಿಗೆ ಒಳ್ಳೆಯ ಬದುಕನ್ನು ಬೋಧಿಸಿದ ಸಂತ. 2) ಎರಡನೆಯವನು, ಬಹಮನಿ ಅರಸು; ಕಲೆ, ಸಾಹಿತ್ಯಗಳಿಗೆ ಹೆಚ್ಚು ಪ್ರೋತ್ಸಾಹ ನೀಡಿ, ದೇಶವಿದೇಶಗಳಿಗೆ ರಾಯಭಾರಿಗಳನ್ನು ಕಳಿಸಿದ; ಅಲ್ಲಿಯ ಅಪ್ರತಿಮ ವಿದ್ವಾಂಸರನ್ನು ಮುಕ್ತ ಮನಸ್ಸಿನಿಂದ ಬರಮಾಡಿಕೊಂಡ; ಸ್ವತಃ ಒಳ್ಳೆ ವಿದ್ವಾಂಸ ಮತ್ತು ಕವಿಯಾಗಿ ಬೆಳೆದ. 3)ಮೂರನೆಯವನು, ಇಸ್ಲಾಂ ಧರ್ಮ ಮತ್ತು ತತ್ವಜ್ಞಾನಿ; ಫಾರಸಿ, ಅರಬ್ಬಿ ಭಾಷೆಗಳಲ್ಲಿ ಪಾಂಡಿತ್ಯ ಪಡೆದು ಅಂದಿನ ಮುಸ್ಲಿಂ ದೇಶಗಳಲ್ಲೆಲ್ಲ ಪ್ರಸಿದ್ಧನಾಗಿದ್ದ; ಈ ನಾಡಿನ ಸಂಸ್ಕೃತಿ ವಿದೇಶಗಳಲ್ಲಿ ಹರಡುವಂತೆ ಮಾಡಿದ; ರಾಜ್ಯಕ್ಕೆ ಸ್ಥಿರತೆಕೊಟ್ಟ. ದಖ್ಖನ್ ಅದರಲ್ಲೂ ತಮ್ಮ ಕರ್ಮಭೂಮಿಯಾಗಿದ್ದ ಇಂದಿನ ಕರ್ನಾಟಕದ ಬೀದರ್, ಗುಲ್ಬರ್ಗಾಗಳನ್ನು ದೇಶದ ವಿದೇಶಗಳ ನಕ್ಷೆಯಲ್ಲಿ ಎದ್ದುಕಾಣುವಂತೆ ಈ ಮೂವರೂ ಮಾಡಿದ್ದಾರೆ.

**1. ಹಜರತ್ ಬಂದೇ ನವಾಝ್ ಗೇಸುರಾಜ್ (1313–1422):** ನೂರೊಂಬತ್ತು ವರ್ಷ ಬದುಕಿದ ಈ ಸೂಫಿ ಸಂತ, 600 ವರ್ಷಗಳ ತರುವಾಯವೂ ಗುಲ್ಬರ್ಗಾದ ಅವನ ದರ್ಗಾ (ಸಮಾಧಿ) ಸ್ಥಳದಲ್ಲಿ ಪ್ರತಿ ವರ್ಷ ನಡೆಯುವ ಉರುಸಿನಿಂದಾಗಿ (ವಾರ್ಷಿಕ ತಿಥಿಯಂದು ನಡೆಯುವ ಸಮಾರಂಭ; ಜಾತ್ರೆ) ಲಕ್ಷಾವಧಿ ಭಾವುಕ ಭಕ್ತರ ಮನಸ್ಸಿನಲ್ಲಿ ನೆಲೆಯೂರಿಬಿಟ್ಟಿದ್ದಾನೆ! ಈ ಭಕ್ತರಲ್ಲಿ ಹಿಂದೂ–ಮುಸ್ಲಿಂ ಎಂಬ ಅಂತರವಿಲ್ಲ. ಪರ್ಶಿಯದ ಹೀರತ್‌ದಿಂದ ಬಂದಿದ್ದ ಸೈಯದ್ ಯುಸೂಫ್ ಹುಸೇನಿ ಎಂಬ ವಿದ್ವಾಂಸ, ಮುಹಮ್ಮದ ತುಘಲಕನ ಆಸ್ಥಾನದಲ್ಲಿ ಇದ್ದ. ಆ ಸಾಮ್ರಾಟನು ದಿಲ್ಲಿಯಿಂದ ದೌಲತಾಬಾದಕ್ಕೆ ರಾಜಧಾನಿಯನ್ನು ಸ್ಥಳಾಂತರಿಸಿದಾಗ ಆತನೂ ದಖ್ಖನಿಗೆ ಬಂದ. ಆಗ ಮಗ, ಸೈಯದ್

ಹುಸೇನ್ (ಮುಂದೆ ಬಂದೇ ನವಾಝ್) ಏಳುವರ್ಷದ ಬಾಲಕ. ಅಲ್ಲಿ ಬಂದ ಮೂರೇ ವರ್ಷಕ್ಕೆ ತಂದೆ ತೀರಿಕೊಂಡ. ಚಿಕ್ಕಪ್ಪ ದೌಲತಾಬಾದದ ಗವರ್ನರನಾಗಿದ್ದರಿಂದ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ತೊಂದರೆಯಾಗಲಿಲ್ಲ. ಹೆಚ್ಚಿನ ವ್ಯಾಸಂಗಕ್ಕೆ ಆ ಬಳಿಕ ದಿಲ್ಲಿಗೆ ಹೊರಟು ಪ್ರಸಿದ್ಧ ಸೂಫಿ ಸಂತ ನಾಸೀರುದ್ದೀನನ ಪ್ರಭಾವಕ್ಕೆ ಒಳಗಾದ. ಸಂಸ್ಕೃತ, ಅರಬ್ಬೀ, ಫಾರಸಿ ಭಾಷೆಗಳಲ್ಲಿ ವಿದ್ವತ್ತೆ ಪಡೆದ. ತಿರುಗಿ ಆತ ಬಹಮನಿಗಳ ರಾಜಧಾನಿ ಗುಲ್ಬರ್ಗಾಕ್ಕೆ ಬಂದಾಗ ಇಳಿವಯಸ್ಸಿನವನಾಗಿದ್ದ. ಬಹಮನಿ ಅರಸನಾಗಿದ್ದ ಫಿರೋಜ ಶಹನು, ಸ್ವತಃ ದೌಲತಾಬಾದಕ್ಕೆ ಹೋಗಿ ಮರ್ಯಾದೆಯಿಂದ ಎದುರುಗೊಂಡು ಗುಲ್ಬರ್ಗಾಕ್ಕೆ ಕರೆತಂದು, ಆತನಿಗಾಗಿ ದೊಡ್ಡ ಖಾನಖಾ (ಸೂಫಿ ಮಠ)ವೊಂದನ್ನು ಕಟ್ಟಿಸಿ ಆತ ನೆಲೆಗೊಳ್ಳುವಂತೆ ನೋಡಿಕೊಂಡ. ಬಂದೇ ನವಾಝನ ಬೋಧನೆಯಿಂದಾಗಿ ಸೂಫೀ ಪಂಥ ಈ ನಾಡಿನಲ್ಲಿ ಶೀಘ್ರವಾಗಿ ಹರಡಿತು.

**ಸೂಫೀ ಪ್ರಭಾವ**

ಇಸ್ಲಾಂ ಧರ್ಮದ ಅಧ್ಯಾತ್ಮಿಕ ರೂಪಕ್ಕೆ 'ಸೂಫಿ' ಪಂಥ ಎಂದು ಕರೆಯಲಾಗುತ್ತದೆ. ಮೂಲತಃ ದ್ವೈತ ಧರ್ಮವಾದ ಇಸ್ಲಾಂದಲ್ಲಿ ದೇವ ಹಾಗೂ ಜೀವರ ಅಸ್ತಿತ್ವ ಬೇರೆಯೇ! ಅವರಿಬ್ಬರೂ ಒಂದಾಗುವದು ಶಕ್ಯವಿಲ್ಲ. ನಿರ್ದಿಷ್ಟ ನಮಾಜ್ ರೋಜಾ (ಉಪವಾಸ), ಜಕಾತ್ (ಸಂಪತ್ತಿನ ತೆರಿಗೆಯ ಯೋಗ್ಯ ದಾನ) ಮತ್ತು ಹಜ್ ಯಾತ್ರೆಗಳನ್ನು ನಿಯಮಿತವಾಗಿ ಕೈಕೊಳ್ಳುವ ಧರ್ಮಿಷ್ಠನು ಸ್ವರ್ಗ ಪಡೆಯುತ್ತಾನೆ ಎಂಬುದು ನಂಬಿಕೆ. ಆದರೆ ಸೂಫಿ ಪಂಥ. ನಿಜವಾದ ಸಾಧಕರು, ಇನ್ನೂ ಉತ್ತಮ ಮಟ್ಟಕ್ಕೆ ಏರಬಹುದು! ಎಂದು ಪ್ರತಿಪಾದಿಸುತ್ತದೆ. ಆತ್ಮಜ್ಞಾನಕ್ಕೆ ಒತ್ತುಕೊಡುತ್ತದೆ. ಇದರ ಪ್ರಕಾರ ಪರಮಸತ್ಯವನ್ನು ಸಾಧಕನು ಪ್ರಾರ್ಥನೆ, ಧ್ಯಾನ, ಉಪಾಸನೆಗಳಿಂದ ಕಂಡುಕೊಳ್ಳುತ್ತಾನೆ. ಈ ಪರಮ ಸತ್ಯವೆಂದರೆ, 'ನಾನು-ನೀನು' (ಪರಮಾತ್ಮ) ಎಂಬ ಭೇದ ದಾಟಿ ಹೋದ ಸ್ಥಿತಿ. ಅದು 'ಅನ್-ಅಲ್-ಹಕ್', ಅಥವಾ 'ನಾನೇ ಸತ್ಯ' ಎಂಬುದಾಗಿದೆ. ಇದು ಹಿಂದೂ ವೇದಾಂತದ 'ಅಹಂ ಬ್ರಹ್ಮಾಸ್ಮಿ' (ನಾನೇ ಬ್ರಹ್ಮ) ಎಂಬ ತತ್ವವನ್ನು ಬಹಳವಾಗಿ ಹೋಲುತ್ತದೆ- 'ತನ್ನ ತಾನು ಅರಿತು ಪರಮಾತ್ಮನಲ್ಲಿ ಲೀನವಾಗುವ ತತ್ವ.' ಭಾರತದಲ್ಲಿ ತುಂಬ ಪ್ರಾಚೀನ ಕಾಲದಿಂದ ರೂಢಿಯಲ್ಲಿತ್ತು. ಅಲ್ ಹಲ್ಲಾಜ್ (ಕ್ರಿ.ಶ. 858-922) ಎಂಬ ಪರ್ಶಿಯದ ಸಂಚಾರಿ ತತ್ವಜ್ಞಾನಿ, ಭಾರತಕ್ಕೆ ಬಂದಿದ್ದ. ಇಲ್ಲಿಯ ಸಿದ್ಧರಿಂದ,

ಯೋಗಿಗಳಿಂದ ಬಹಳ ಪ್ರಭಾವಿತನಾಗಿದ್ದ. ಪರ್ಶಿಯಾಕ್ಕೆ ಮರಳಿದ ಬಳಿಕ ತಾನು ಕಂಡುಕೊಂಡ ತತ್ವವನ್ನು ತನ್ನ ಜನರಿಗೆ ಬೋಧಿಸಲಾರಂಭಿಸಿದ.

ಆದರೆ ಇಸ್ಲಾಂ ಸಂಪ್ರದಾಯವಾದಿಗಳಿಗೆ ಇದು ಸಹನವಾಗಲಿಲ್ಲ. ಪ್ರೀತಿ ಅಥವಾ ಪ್ರೇಮ ಮತ್ತು ಭಕ್ತಿಯಿಂದ ಪರಮಾತ್ಮನನ್ನು ಪಡೆಯಬಹುದು (ಆಂಡಾಳ್, ಅಕ್ಕಮಹಾದೇವಿ, ಮೀರಾರಂತೆ) ಎಂದು ನಂಬಿದ ರಾಬಿಯಾ (717–801) ಇನ್ನೊಬ್ಬ ಸಂತಳು. ಇವರಿಬ್ಬರೂ ಚಿತ್ರಹಿಂಸೆಯಿಂದ ಹತರಾದರು. ಆದರೆ ಜಲಾಲುದ್ದೀನ ರೂಮಿ (1207–1273)ಯೊಂದಿಗೆ ಇರಾಕ್, ಇರಾಣಿ (ಪರ್ಶಿಯಾ) ಮತ್ತಿತರ ದೇಶಗಳಲ್ಲಿ ಸೂಫಿ ಪ್ರಣಾಲಿ ಹರಡಲಿಕ್ಕೆ ಕಾರಣರಾದರು. ಸಂತರನ್ನು ಕೊಂದರೂ ಅವರ ಬೋಧನೆಯನ್ನು ಧರ್ಮಾಂಧರಿಂದ ಕೊಲ್ಲಲಾಗಲಿಲ್ಲ. ಸೂಫಿ ಧರ್ಮ ಎಲ್ಲೆಡೆ ಹರಡಿತು. ಭಾರತದಲ್ಲಿ ಭಕ್ತಿಪಂಥದ ಹಲವಾರು ಅಂಶಗಳನ್ನು ಹೀರಿಕೊಂಡು ಪ್ರಾದೇಶಿಕ ರೂಪವನ್ನು ಪಡೆದುಕೊಂಡು ಹುಲುಸಾಗಿ ಬೆಳೆಯಿತು. ಬಂದೇ ನವಾಝ್ ಅಂದು ಪ್ರಚಲಿತವಿದ್ದ ಅನೇಕ ಭಾಷೆಗಳನ್ನು ಬಲ್ಲವನಾಗಿದ್ದರೂ 'ದಖನಿ' (ಉರ್ದುಫ) ಈ ಪ್ರದೇಶದ ಆಡುಭಾಷೆಯಾಗಿದ್ದರಿಂದ ಆ ಭಾಷೆಯಲ್ಲಿ ಬೋಧಿಸಿ ಜನಪ್ರಿಯನಾದ.

'ಸೇವೆಗಿಂತ ಹಿರಿದಾದ ಧರ್ಮ ಇನ್ನೊಂದಿಲ್ಲ. ಕೌಟುಂಬಿಕ ಧಾರ್ಮಿಕ ಸಾಮಾಜಿಕ, ಹೊಣೆಯನ್ನು ಸರಿಯಾಗಿ ನಿರ್ವಹಿಸುವವನು ಉತ್ತಮ ಮನುಷ್ಯನಾಗುತ್ತಾನೆ. ಇದಕ್ಕೆ ಗುರುವಿನ ಮಾರ್ಗದರ್ಶನ ಬೇಕು ಗುರುಸೇವೆಯನ್ನೂ ಮಾಡಬೇಕು' ಎಂದು ಮೂಲ ಇಸ್ಲಾಂದಲ್ಲಿ ಒಳಗೊಂಡಿರದ ಆದರೆ ಈ ನೆಲಕ್ಕೆ ಸಮೀಪವಾದ ತತ್ವಗಳು ಅವನ ಬೋಧನೆಯಲ್ಲಿ ಇದ್ದವು. 'ನನಗೆ ಸೂಜಿ ಕೊಡು. ಚೂರಿ ಬೇಡ. ಸೂಜಿ ಬೆಸೆಯುತ್ತದೆ. ಚೂರಿ ಇರಿಯುತ್ತದೆ.' ಇದು ಬಂದೇ ನವಾಝುನ ಪ್ರಸಿದ್ಧ ವಾಕ್ಯ.

ಬಹುಭಾಷೆ, ಬಹುದೇವತೆಗಳು, ಬಹುವ್ರತ ಉಪಾಸನೆಗಳ ನಾಡಾದ ದಖ್ಖನಿನಲ್ಲಿ ಬಂದೇ ನವಾಝುನು ಬಹಳ ಬೇಗ ಜನರ ಮನಸ್ಸನ್ನು ಗೆದ್ದ. ಕ್ರಮೇಣ ಭಕ್ತಿಯ ಭಾವೋನ್ಮಾದದ ನೃತ್ಯ, ಸಂಗೀತ ಮತ್ತು ಸಂಗೀತಾರಾಧನೆಗಳು ಸೂಫಿ ಪಂಥದಲ್ಲಿ ಸೇರ್ಪಡೆಯಾದವು. ದಖ್ಖನದ ಸಾಂಸ್ಕೃತಿಕ ಬೆಳವಣಿಗೆಗೆ ಸೂಫಿ ಪಂಥದ ಕೊಡುಗೆ ದೊಡ್ಡದು. 'ಸೂಫಿ' ಎಂದರೆ ಅರಬ್ಬಿ ಭಾಷೆಯಲ್ಲಿ ಉಣ್ಣೆ. ಮೊಟ್ಟ ಮೊದಲ ಸೂಫಿಗಳು ಉಣ್ಣೆಯ ಕಂಬಳಿ ಹೊದೆಯುತ್ತಿದ್ದರು. ಇವರಲ್ಲಿ ಫಕೀರರೆನಿಸಿಕೊಂಡವರ ಉಡುಪು



ಬಂದೇ ನವಾಝ್ ದರ್ಗಾ, ಗುಲ್ಬರ್ಗಾ

ಅದೇ! ಹಾಸಿಗೆಯೂ ಅದೇ! ಊರಿಂದೂರಿಗೆ ಅಲೆಯುವಾಗ ಅದರಲ್ಲೇ ತಮ್ಮ ತೀರ ಅಗತ್ಯದ ಸಾಮಾನುಗಳನ್ನು ಒಯ್ಯುತ್ತಿದ್ದರು. ವೈರಾಗ್ಯದ ಸಂಕೇತವಾದ ಸೂಫ಼ಿ (ಕಂಬಳಿ)ಯಿಂದಾಗಿ 'ಸೂಫ಼ಿ'ಗಳೆಂದು ಗುರುತಿಸಲ್ಪಡುತ್ತಿದ್ದರು. ಸೂಫ಼ಿಗಳಲ್ಲಿ ವಿದ್ವಾಂಸರು, ಸಂಸಾರಿಗಳು, ವಿರಕ್ತರು, ಕವಿಗಳು, ಸಂಗೀತಕಾರರು ಕಾಣಿಸಿಕೊಂಡರು.

ಹಿಂದೂ-ಮುಸ್ಲಿಂ ಭೇದವಿಲ್ಲದೇ ಬಂದೇ ನವಾಝುನ ಶಿಷ್ಯ ಪರಂಪರೆ ಬೆಳೆಯಿತು. 'ಕೇಶವ ಚೈತನ್ಯ'ನೆಂದು ಕೆಲವರು ಬಂದೇ ನವಾಝುನನ್ನು ಪೂಜಿಸುತ್ತಾರೆ. ಗುಲ್ಬರ್ಗಾ ನಗರವು ಸೂಫ಼ಿ ಜ್ಞಾನಾರ್ಜನೆಯ ಕೇಂದ್ರವಾಗಿ ಬೆಳೆಯಿತು. ದಖ್ಖನ್ ಪ್ರದೇಶದ ಹಳ್ಳಿ ಹಳ್ಳಿಗಳಲ್ಲಿ ಸೂಫ಼ಿ ಸಂತರು ಕಾಣಿಸಿಕೊಂಡರು. ದತ್ತಾತ್ರಯನನ್ನು ಸೂಫ಼ಿ ಫ಼ಕೀರನೆಂದು ಎರಡೂ ಮತಗಳ ಜನ ಪೂಜಿಸಿದರು. ಮುಂದೆ ಆದಿಲ್ ಶಾಹಿ ವಂಶದ ಸ್ಥಾಪಕನಾದ ಯುಸೂಫ಼್ ಆದಿಲ್ ಶಹನು ಅರಮನೆಯ ಆವರಣದಲ್ಲೇ ನರಸಿಂಹದತ್ತ ಮಂದಿರವನ್ನು ಕಟ್ಟಿಸಿದ. ದತ್ತ ಸಂಪ್ರದಾಯಕ್ಕೆ ಕರ್ನಾಟಕದಲ್ಲಿ ಬಲವಾದ ಬುನಾದಿ ಹಾಕಿದ ನರಸಿಂಹ ಸರಸ್ವತಿ (1378-1458) ಗಾಣಗಾಪುರದ

ಸಂತರೆಂದು ಪ್ರಸಿದ್ಧರು. ಕರ್ನಾಟಕ-ಮಹಾರಾಷ್ಟ್ರಗಳಲ್ಲಿ ಮುಖ್ಯ ಪಾರಾಯಣ ಗ್ರಂಥವಾದ 'ಗುರುಚರಿತ್ರೆ' ಅವರ ಜೀವನ ಸಾಧನೆಗಳ ಕುರಿತಾಗಿ ಇದೆ. ಕೊನೆಯ ಬಹಮನಿ ಅರಸು, ಅಲ್ಲಾವುದ್ದೀನನ ವಾಸಿಯಾಗದ ಕುರವನ್ನು ಗುಣಪಡಿಸಿದ ಖ್ಯಾತಿ ನರಸಿಂಹ ಸರಸ್ವತಿಗಳದು.

ಸೂಫಿ ಸಂತರ ಸಮಾಧಿಗಳಿದ್ದ ಚಿಕ್ಕ ದೊಡ್ಡ ಊರುಗಳಲ್ಲಿ ಆಯಾ ಸಂತರ ದರ್ಗಾಗಳಿದ್ದು ವಾರ್ಷಿಕ ತಿಥಿಯಂದು ಜರುಗುವ ಉರುಸೆಗಳಲ್ಲಿ ಲಕ್ಷಗಟ್ಟಲೆ ಬತ್ತಾಸು ಓದಿಸುತ್ತಾರೆ. ಮಕ್ಕಳಾಗದವರಿಗೆ ಸಂತರ ಆಶೀರ್ವಾದದಿಂದ ಮುಂದೆ ಸಂತಾನವಾದರೆ ಫಕೀರವ್ವ, ಪೀರಪ್ಪ (ಪೀರ್=ಸೂಫಿಗುರು), ಲಾಡ್ ಸಾಬ್ ಎಂದೆಲ್ಲ ಹಿಂದೂಗಳಲ್ಲಿ ಮಕ್ಕಳಿಗೆ ಹೆಸರಿಡುತ್ತಾರೆ.

ಈಗಲೂ ಬಂದೇ ನವಾಝ್ ದರ್ಗಾದಲ್ಲಿ ರಾತ್ರಿಯಿಡೀ ಮಹಫಿಲ್ 'ಸಮಾ'ಗಳು ನಡೆಯುತ್ತವೆ. ಸಮಾ ಎಂದರೆ ಸೂಫಿ ಅನುಭಾವಿ ಸಂಗೀತಗೋಷ್ಠಿಗಳು. ಈಗ ಜನಪ್ರಿಯವಾದ ಕವ್ವಾಲಿ ಸಂಗೀತ ಪ್ರಕಾರದ ಉಗಮವನ್ನು 'ಸಮಾ'ದ ಸಂಗೀತಗೋಷ್ಠಿಗಳಲ್ಲಿ ಗುರುತಿಸಲಾಗುತ್ತದೆ.

ಹಿಂದೂ-ಮುಸ್ಲಿಂ ಭಾವೈಕ್ಯತೆ, ಬಂದೇ ನವಾಝನ ಮತ್ತು ಆತನ ಸಮಕಾಲೀನ ಹಾಗೂ ನಂತರದ ಸೂಫಿ ಸಂತರಿಂದ ದಖ್ಖನ್ ಪ್ರದೇಶದಲ್ಲೆಲ್ಲ ಹರಡಿತು. ಪೂಜೆ ಪುನಸ್ಕಾರಗಳ ಹೊರತಾಗಿ ಜಾನಪದ ಸಾಹಿತ್ಯಕ್ಕೆ ಒಳ್ಳೆಯ ಪುಷ್ಟಿಕೊಟ್ಟಿತು.

**2. ಬಹಮನಿ ಅರಸು ಫಿರೋಝ್ ಶಹ (1397-1422)**: ಬಹಮನಿ ವಂಶದ ಎಂಟನೆಯ ಅರಸನಾಗಿದ್ದ ಫಿರೋಝ್ ಶಹನು ಆ ಮನೆತನದ ಶ್ರೇಷ್ಠ ಅರಸನೆಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ. ಉತ್ತಮ ಯೋಧನೂ, ಸಮರ್ಥ ಆಡಳಿತಗಾರನೂ ಆಗಿದ್ದಂತೆ ವಿದ್ಯೆಯ ಪಕ್ಷಪಾತಿಯಾಗಿದ್ದ. ಹಿಂದೂಗಳ ಬಗ್ಗೆ ಸಹನ-ಶೀಲತೆ ತಳೆದಿದ್ದು, ಅನೇಕ ಮುಖ್ಯ ಹುದ್ದೆಗಳಲ್ಲಿ ಅವರನ್ನು ನೇಮಿಸಿದ್ದ. ವಿರಾಮ ಸಮಯದಲ್ಲಿ ಶಹಾನಾಮ (ಫಾರಸಿ ಭಾಷೆಯ ಅರಸರ ವಂಶಾವಳಿಯ ಪ್ರಸಿದ್ಧ ಗ್ರಂಥ) ಓದಿಸಿ ಕೇಳುತಿದ್ದ. ಪ್ರತಿವರ್ಷ ಗೋವಾ ಬಂದರದಿಂದ ತುರ್ಕಸ್ತಾನ, ಪರ್ಶಿಯ, ಈಜಿಪ್ಟ್ ದೇಶಗಳಿಗೆ ಹಡಗುಗಳನ್ನು ಕಳಿಸಿ ಅಲ್ಲಿಯ ಪ್ರಸಿದ್ಧ ವಿದ್ವಾಂಸರನ್ನು ತನ್ನ ರಾಜ್ಯಕ್ಕೆ ಬರಮಾಡಿಕೊಳ್ಳುತ್ತಿದ್ದ. ಇಲ್ಲಿಯೇ ನೆಲೆಸುವಂತೆ ಅವರನ್ನು ಒಲಿಸುತ್ತಿದ್ದ.

ಸಸ್ಯಶಾಸ್ತ್ರ, ಭೂಮಿತಿ, ತರ್ಕಶಾಸ್ತ್ರ, ನಕ್ಷತ್ರಶಾಸ್ತ್ರಗಳಲ್ಲಿ ಆತನಿಗೆ ಹೆಚ್ಚಿನ ಆಸಕ್ತಿ ಇತ್ತು. ಖಗೋಲ-ಜೋತಿಷ್ಯಶಾಸ್ತ್ರಗಳಲ್ಲೂ ಪ್ರೀತಿಯಿದ್ದುದರಿಂದ ದೌಲತಾಬಾದದಲ್ಲಿ ನಕ್ಷತ್ರ ವೀಕ್ಷಣಾಲಯವೊಂದನ್ನು ಆ ವಿಷಯದಲ್ಲಿ ಖ್ಯಾತ ವಿದ್ವಾಂಸನಾಗಿದ್ದ ಗಿಲಾನಿಯ ನೇತೃತ್ವದಲ್ಲಿ ಕಟ್ಟಿಸಲಾರಂಭಿಸಿದ್ದ. ಆದರೆ ಗಿಲಾನಿಯ ಅಕಾಲ ಮರಣದಿಂದ ಅದು ಅರ್ಧಕ್ಕೆ ನಿಂತಿತು.

ಫಿರೋಝ್ ಶಹನ ಬಳಿಕ ಪಟ್ಟವೇರಿದ ಸೋದರ ಅಹಮ್ಮದ ಶಹ ಬಂದೇ ನವಾಝುನ ಅಂತರಂಗದ ಶಿಷ್ಯನಾಗಿದ್ದು ವಲಿ(ಸಂತ)ನೆಂದೇ ಆ ಪ್ರದೇಶದಲ್ಲಿ ಗುರುತಿಸಲ್ಪಡುತ್ತಾನೆ.

ವಿಜಯನಗರದೊಡನೆ ಮಾಡಿದ ಯುದ್ಧವೊಂದರಲ್ಲಿ ಈ ಅಹಮ್ಮದ ಶಹನು ಗುಂಡಭಟ್ಟ, ತಿಮ್ಮಭಟ್ಟ ಎಂಬ ಇಬ್ಬರು ಬುದ್ಧಿಶಾಲಿ ಬ್ರಾಹ್ಮಣರನ್ನು ಗುಲಾಮರನ್ನಾಗಿಸಿ ತಂದು ಮತಾಂತರಗೊಳಿಸಿದ. ಅವರಿಬ್ಬರೂ ಮುಂದೆ ಶಾಹೀ ರಾಜ್ಯಗಳ ಸ್ಥಾಪನೆಗೆ ಕಾರಣರಾದರು. ಒಬ್ಬನು ಫತುಲಾ ಇಮಾದ್ ಉಲ್‌ಮುಲ್ಕನೆಂಬ ಹೆಸರು ಪಡೆದು ಬೇರಾರ (ವಿದರ್ಭ)ದ ಇಮಾದಶಾಹಿ ಸ್ಥಾಪಿಸಿದರೆ, ಇನ್ನೊಬ್ಬಾತ ಅಹ್ಮದ್ ಹಸನ್ ನಿಜಾಮ್ ಉಲ್‌ಮುಲ್ಕ ಎಂಬ ಪ್ರಖ್ಯಾತ ಸರದಾರನಾದ. ಇವನ ಮಗ ಅಹಮ್ಮದ ಶಹನೇ ಅಹಮ್ಮದ ನಗರದ ನಿಜಾಮಶಾಹಿ ರಾಜ್ಯ ಸ್ಥಾಪಿಸಿದ. ಈ ವಂಶದ ಮೂರನೆಯ ಅರಸನ ಮಗಳೇ ಧೀರರಾಣಿ ಚಾಂದಬೀಬಿ.

**3. ಬಹಮನಿ ಯುಗದ ಮೂರನೆಯ ಮಿಂಚುತಾರೆ ಮಹಮ್ಮದ್ ಗವಾನ್ (1411–1484):** ಪರ್ಶಿಯದಲ್ಲಿ ಹುಟ್ಟಿ ಬೆಳೆದ ಗವಾನನು ಶ್ರೀಮಂತ ವ್ಯಾಪಾರಿ ಕುಟುಂಬಕ್ಕೆ ಸೇರಿದವ. ಗಣಿತ, ಇಸ್ಲಾಂ ಧರ್ಮಶಾಸ್ತ್ರ ಮತ್ತು ಪರ್ಶಿಯನ್ ಭಾಷೆಗಳಲ್ಲಿ ಹೆಚ್ಚಿನ ಅಧ್ಯಯನ ಕೈಕೊಂಡು ವಿದ್ವಾಂಸನೆಂದು ಖ್ಯಾತಿಗಳಿಸಿದ್ದ. ರಾಜನೀತಿಯನ್ನು ರೂಢಿಸಿಕೊಂಡಿದ್ದ ತನ್ನ ಪರಿಚಯದ ವಿದ್ವಾಂಸನನ್ನು ಭೇಟಿ ಮಾಡಲೆಂದು ಆಗಿನ ಬಹಮನಿ ರಾಜಧಾನಿಯಾಗಿದ್ದ ಬೀದರಕ್ಕೆ ಬಂದ. ಆತನ ವಿದ್ವತ್ತೆಯಿಂದ ಪ್ರಭಾವಿತವಾದ ರಾಜಪರಿವಾರದವರ ಆಗ್ರಹಕ್ಕೆ ಮಣಿದು ಅಲ್ಲಿಯೇ ನೆಲೆನಿಂತ.

ಆಗಿನ್ನೂ ಎಳೆಯನಾಗಿದ್ದ ಬಹಮನಿ ಅರಸು ಮಹಮೂದನ ದೌರ್ಬಲ್ಯದಿಂದ ಉತೇಜಿತರಾದ ವಿಜಯನಗರದವರು ಗೋವಾ ಬಂದರವನ್ನು ಆಕ್ರಮಿಸಿದರೆ, ಕೊಂಕಣ ಕರಾವಳಿಯ ರಾಜ ಸ್ವತಂತ್ರನಾದ. ಇಬ್ಬರನ್ನೂ ಗೆದ್ದು ಮಹಮ್ಮದ ಗವಾನನು ಯುದ್ಧ ತಂತ್ರದಲ್ಲೂ ಮಿಗಿಲೆಂದು

ತೋರಿಸಿಕೊಂಡ. ವಿದ್ಯಾ ಪ್ರೇಮಿಯಾಗಿದ್ದ ಆತನ ಸ್ವಂತ ವಾಚನಾಲಯದಲ್ಲಿ 1000 ಗ್ರಂಥಗಳಿದ್ದವು. ಗವಾನ್ ಒಳ್ಳೆಯ ಆಡಳಿತಗಾರನೂ ಆಗಿದ್ದ. ಸಾದಾ ಸರಳ ಜೀವನ ನಡೆಸುತ್ತಿದ್ದ. ಬೀದರದಲ್ಲಿ ಪ್ರಸಿದ್ಧ ವಿದ್ಯಾಲಯ (ಮದರಸಾ) ಕಟ್ಟಿಸಿದ. ದೇಶ ವಿದೇಶಗಳ ವ್ಯಾಖ್ಯಾತೃಗಳು ವಿದ್ಯಾರ್ಥಿಗಳು ಇಲ್ಲಿಗೆ ಬರುತ್ತಿದ್ದರು.

ಸಮರ್ಥ, ನಿಸ್ವಾರ್ಥಿ, ಪ್ರಜಾಪ್ರೇಮಿ ಹಾಗೂ ದೊಡ್ಡ ವಿದ್ವಾಂಸನೂ ಆಗಿದ್ದ ಮಹಮ್ಮದ ಗವಾನನು, ಸರದಾರರ ಪರಸ್ಪರ ಮತ್ಸರ ಮತ್ತು ವೈರತ್ವಗಳಿಗೆ ಈಡಾಗಿ ಶಿರಚ್ಛೇದನದಂತಹ ಘೋರ ಹತ್ಯೆಗೆ ಒಳಗಾಗಿದ್ದು ದೊಡ್ಡ ದುರಂತ.

* * *

ಕ್ರಮೇಣ ಬಹಮನಿ ರಾಜ್ಯಕ್ಕೆ ಗ್ರಹಣ ಕವಿಯಲಾರಂಭಿಸಿತು. ನಾಲ್ಕನೆಯ ಮಹಮೂದನ ಬಳಿಕ ಬಂದ ಬಹಮನಿ ಅರಸರೆಲ್ಲ ದುರ್ಬಲರೂ, ಅಲ್ಪಾಯುಗಳು ಆಗಿದ್ದರು. ನಾಲ್ಕು ಮುಖ್ಯ ತರಫ್‌ಗಳ ಮುಖ್ಯರು ಸ್ವತಂತ್ರರಾದರು. ಯುಸಫ್ ಆದಿಲ್ ಖಾನನು ಬಿಜಾಪುರದಲ್ಲಿ, ಅಹಮ್ಮದ ನಿಜಾಮನು ಅಹಮ್ಮದ ನಗರದಲ್ಲಿ ಮತ್ತು ಇಮಾದ್ ಉಲ್ ಮುಲ್ಲನು ಬಿಹಾರದಲ್ಲಿ ರಾಜ್ಯ ಸ್ಥಾಪಿಸಿದರು. ಕುತುಬ್ ಉಲ್ ಮುಲ್ಕನು ಗೋವಳಕೊಂಡವನ್ನು ತನ್ನ ಅರಸೊತ್ತಿಗೆಯ ಕೇಂದ್ರ ಮಾಡಿಕೊಂಡರೆ, ಬಹಮನಿಗಳ ರಾಜಧಾನಿ ಬೀದರದ ಮುಖ್ಯಾಧಿಕಾರಿ, ಕಾಸಿಂ ಬರೀದನೂ ಸುಲ್ತಾನನ್ನು ಕೈಗೊಂಬೆಯಾಗಿಸಿ ಕೊನೆಗೊಂದು ದಿನ ಬರೀದ ಶಹನೆಂದು ತನ್ನನ್ನು ಕರೆದುಕೊಂಡು ಸ್ವತಂತ್ರ ಅರಸನಾದ. ಹೀಗೆ ವಿಶಾಲವಾಗಿದ್ದ ಬಹಮನಿ ರಾಜ್ಯ ಒಡೆದು ಹೋಳಾಗಿ ಪಂಚಶಾಹೀಗಳು ಕಾಣಿಸಿಕೊಂಡವು. ಬಹಮನಿಗಳ ಕಾಲಕ್ಕೆ ರೂಪಗೊಂಡ ದಖ್ಖನಿ ಸಂಸ್ಕೃತಿ, ರಾಜಕೀಯವಾಗಿ ಐದು ಪ್ರದೇಶಗಳಲ್ಲಿ ಬೇರ್ಪಟ್ಟರೂ ವಿಶಿಷ್ಟ ರೂಪತಳೆದು ಇಡೀ ಭಾರತಕ್ಕೆ ಹಲವಾರು ಕ್ಷೇತ್ರಗಳಲ್ಲಿ ಕೊಡುಗೆ ನೀಡಿವೆ. ಅವುಗಳಲ್ಲಿ ಬಿಜಾಪುರದ ಆದಿಲ್‌ಶಾಹಿಗಳ ಕೊಡುಗೆ ಶ್ರೇಷ್ಠ ಮಟ್ಟದ್ದಾಗಿದೆ. ಯಾವುದೇ ವಂಶದಲ್ಲಿ ಎಲ್ಲ ಅರಸರು ಕಲಾಸಕ್ತರೂ, ವಿದ್ಯಾಪ್ರೇಮಿಗಳೂ, ಸ್ವತಃ ಕೆಲವುಗಳಲ್ಲಿ ಪರಿಣತರೂ ಕವಿ, ಸಾಹಿತಿಗಳ ಪೋಷಕರೂ ಆಗಿರುವದು ಅಪರೂಪ! ಆ ಭಾಗ್ಯ ಬಿಜಾಪುರದ್ದು ಆಯಿತು. ಎರಡು ಶತಮಾನಗಳ ಕಾಲ ಆಳಿದ ಆದಿಲ್‌ಶಾಹಿಗಳು ಹಲವು ವಿಚಾರಗಳಲ್ಲಿ ಅನನ್ಯರಾಗಿದ್ದರು.

3

# ದಖ್ಖನ್ ತಪ್ಪಲಿನ ಶಾಹಿಗಳು

ಮೊದಲಿಗೆ ದಖ್ಖನ್ ತಪ್ಪಲನ್ನು ಆಳಿದ ಐವರು ಶಾಹಿಗಳ ಪರಿಚಯ ಪಡೆಯೋಣ.

1. **ಬಿಜಾಪುರದ ಆದಿಲ್‌ಶಾಹಿಗಳು** : – (1490–1686) ಒಂಭತ್ತು ಅರಸರು ಆಳಿದ ಬಿಜಾಪುರದ ಆದಿಲ್ ಶಾಹಿಗಳ ಎರಡುನೂರು ವರ್ಷಗಳ ಆಡಳಿತ, ಮೊಗಲರ ಉತ್ತರಭಾರತದ ಆಳುವಿಕೆಗೆ ಸಮಾನಾಂತರವಾಗಿ ಸಾಗಿತು. ಕೊನೆಗೂ ಅವರಿಂದಲೇ ಅವಸಾನ ಕಂಡಿತು.

**ಯುಸೂಫ್ ಆದಿಲ್ ಶಹ** (1490–1510) :– ಆದಿಲ್ ಶಾಹಿ ವಂಶದ ಸ್ಥಾಪಕನು ಯುಸೂಫ್ ಆದಿಲ್ ಖಾನ್ ಎಂಬ ಪರಾಕ್ರಮಶಾಲಿ ಹಾಗೂ ರಾಜಕಾರಣಪಟು. ಮೂಲತಃ ತುರ್ಕಸ್ಥಾನಕ್ಕೆ ಸೇರಿದ ಜಾರ್ಜಿಯಾದಲ್ಲಿ ಹುಟ್ಟಿದ ಈತ ತುರ್ಕಿ ರಾಜವಂಶಕ್ಕೆ ಸೇರಿದವನೇ ಆಗಿದ್ದ. ಸಿಂಹಾಸನಕ್ಕೆ ಪೈಪೋಟಿ ನಡೆದಾಗ ಸೋದರರ ಸಂಬಂಧಿಗಳ ಕೊಲೆ ನಡೆಯುವದು ತೀರ ಸಾಮಾನ್ಯ ಸಂಗತಿಯಾಗಿತ್ತು. ಆತನ ತಾಯಿ ಮಗನ ಕೊಲೆಯನ್ನು ತಪ್ಪಿಸಲು, ಭಾರತಕ್ಕೆ ಹೊರಟ ವರ್ತಕನಿಗೆ ಈ ಮಗನನ್ನು ಒಪ್ಪಿಸಿದಳು. ಗುಲಾಮನಾಗಿ ಬಂದಿದ್ದ ಇವನನ್ನು

ಬಹಮನಿಗಳ ಪ್ರಧಾನಮಂತ್ರಿ ಮಹಮ್ಮದ್ ಗವಾನನು ಕೊಂಡುಕೊಂಡ. ಹೆಚ್ಚಿನ ಬುದ್ಧಿ ಬಲ ಮತ್ತು ಧೈರ್ಯಗಳನ್ನು ಹೊಂದಿದ್ದ ಆದಿಲ್ ಖಾನನಿಗೆ ಗವಾನನ ತರಬೇತಿಯೂ ದೊರೆತು ಅನೇಕ ಯುದ್ಧಗಳಲ್ಲಿ ಆತನ ಬಲಗೈ ಬಂಟನಾಗಿ ಹೋರಾಡಿದ. ಕೊನೆಗೆ ಬಿಜಾಪುರ ಪ್ರಾಂತದ ಪ್ರಾಂತಾಧಿಕಾರಿಯೂ ಆದ. ಬೆಳಗಾಂವ ಪ್ರದೇಶವೂ ಅವನಿಗೆ ಸೇರಿತ್ತು. 1490ರಲ್ಲಿ ಸ್ವತಂತ್ರನಾಗಿ 1510ರ ತನಕ ರಾಜ್ಯವಾಳಿದ.

ಗವಾನನ ಕೊಲೆಯಾದ ಬಳಿಕ 'ಅಫಾಕಿ' (ವಿದೇಶಿ) ಎಂದು ಗುರುತಿಸಲ್ಪಟ್ಟ ಆದಿಲ್ ಖಾನನು ಬಹಮನಿ ರಾಜಧಾನಿ ಬೀದರದಿಂದ ದೂರವೇ ಉಳಿದಿದ್ದ. ಆದರೆ ಆಳರಸರ ಕುರಿತು ನಿಷ್ಠೆಗೆ ಕಡಿಮೆಮಾಡದೇ ಪೋರ್ಚುಗೀಸರು ಆಕ್ರಮಿಸಿದ ಗೋವಾ ಅಂತಾರಾಷ್ಟ್ರೀಯ ಬಂದರನ್ನು ಗೆದ್ದುಕೊಂಡ. ಆ ಬಳಿಕ ಕೊಂಕಣದ ಅಧಿಪತಿ ಗಿಲಾನಿಯನ್ನು ಸೋಲಿಸಿ, ವೆಂಗುರ್ಲಾ, ದಾಭೋಳಗಳನ್ನು ತನ್ನ ರಾಜ್ಯಕ್ಕೆ ಸೇರಿಸಿದ. ಮೊದಲಿಗೆ ಗಿಲಾನಿಯ ಸಹಾಯದಿಂದಲೇ ಗುಲಬರ್ಗಾವನ್ನು ಗೆದ್ದಿದ್ದ. ಬಳಿಕ ಸಮಯ ನೋಡಿ ಅದನ್ನು ಬಿಜಾಪುರಕ್ಕೆ ಸೇರಿಸಿಕೊಂಡುಬಿಟ್ಟ! ಗೋವಾವನ್ನು 1510ರಲ್ಲಿ ಪೋರ್ಚುಗೀಸರು ಪುನಃ ಅವನಿಂದ ಗೆದ್ದುಕೊಂಡರು. ಆ ಬಳಿಕ ಅದು ಶತಮಾನಗಟ್ಟಲೆ ಪೋರ್ಚುಗೀಸರ ಆಧೀನವಾಗಿ ಉಳಿಯಿತು, ಸ್ವತಂತ್ರ ಭಾರತವು 1961ರಲ್ಲಿ ತನ್ನದಾಗಿಸಿಕೊಳ್ಳುವ ತನಕ!

ಯುಸೂಫ್ ಆದಿಲ್ ಖಾನನು ಕಲೆ, ಸಾಹಿತ್ಯಗಳಲ್ಲಿ ಹೆಚ್ಚಿನ ಆಸಕ್ತಿ ತಳೆದಿದ್ದ. ಹರಿತವಾದ ಬಾಣಗಳನ್ನು ತಯಾರಿಸುವಲ್ಲಿ ಒಳ್ಳೆಯ ಕೈ ಚಳಕ ಹೊಂದಿದ್ದ. ಸಂಗೀತದಲ್ಲಿಯೂ ಒಳ್ಳೆಯ ಅಭಿರುಚಿ ಹೊಂದಿದ್ದು 'ಉದ್' ಎಂಬ ವಾದ್ಯವನ್ನು ನುಡಿಸುತ್ತಿದ್ದನಂತೆ!

ಯೂಸೂಫ್ ಖಾನನು, ಮುಕುಂದರಾವ್ ಎಂಬ ಮರಾಠಾ ಸರದಾರನ ಸೋದರಿ, 'ಪುಂಜಿ' ಎಂಬಾಕೆಯನ್ನು ಮದುವೆಯಾಗಿದ್ದ. ಆಡಳಿತದಲ್ಲಿ ಆಕೆ ಸಾಕಷ್ಟು ಪ್ರಭಾವ ಬೀರುತ್ತಿದ್ದಳಂತೆ! ಅನೇಕ ಹಿಂದೂಗಳನ್ನು ಉನ್ನತ ಹುದ್ದೆಗಳಲ್ಲಿ ನೇಮಿಸಿದ್ದ. ಸ್ಥಳೀಯ ಆಡಳಿತದಲ್ಲಿ ಮುಖ್ಯವಾಗಿ ಕಂದಾಯ ಖಾತೆಯಲ್ಲಿ ಹಿಂದೂಗಳನ್ನು ನೇಮಿಸುವ ಪದ್ಧತಿ ಆತನಿಂದ ಪ್ರಾರಂಭವಾಗಿ ಆ ಅರಸು ವಂಶದ ಕೊನೆಯವರೆಗೂ ನಡೆದುಬಂದಿತು. ತನ್ನ ಅರಮನೆಯ ಆವರಣದಲ್ಲೇ ನರಸಿಂಹದತ್ತ ಮಂದಿರವನ್ನು ಕಟ್ಟಿಸಿದ. ದತ್ತಾತ್ರೇಯನ ಅವತಾರವೆಂದೇ ಹಲವು ಜನ ನಂಬಿರುವ ಗಾಣಗಾಪುರದ ಸಂತ ನರಸಿಂಹ

ಸರಸ್ವತಿಯ ಆರಾಧನೆಯನ್ನು ಯುಸೂಫ್ ಖಾನನು ಮಾಡುತ್ತಿದ್ದಿರಬಹುದು. ಮುಂದೆ ಪ್ರಸಿದ್ಧ ಕಲಾರಾಧಕನೆಂದು ಹೆಸರುವಾಸಿಯಾದ ಇಮ್ಮಡಿ ಇಬ್ರಾಹಿಮ್ ಆದಿಲ್ ಶಹನು ಈ ಮಂದಿರಕ್ಕೆ ಬರುತ್ತಿದ್ದ.

ಆದಿಲ್ ಖಾನನು ಬಹಮನಿಗಳ ಕುರಿತು ನಿಷ್ಠೆಹೊಂದಿದ್ದ. ತನ್ನ ಅಧಿಪತಿ ಬಹಮನಿ ಕೊನೆಯ ಅರಸು ಕಲಿಮುಲ್ಲಾ ಬದುಕಿರುವ ತನಕ ತನ್ನನ್ನು 'ಶಹ' ಎಂದು ಕರೆದುಕೊಳ್ಳಲಿಲ್ಲ. ಕೇವಲ 'ಖಾನ್'ನೆಂದು ಕರೆದುಕೊಂಡ ಯುಸೂಫನು, ಕಲಿಮುಲ್ಲಾ ಮರಣವಾದ ನಂತರವೇ 'ಶಹ' ಅಥವಾ ಸುಲ್ತಾನ್ ಎಂಬ ಬಿರುದು ಹೊಂದಿ ಸ್ವತಂತ್ರ ಅರಸನೆಂದು ಘೋಷಿಸಿಕೊಂಡ. ಈತನೂ ಸೇರಿದಂತೆ ಇಸ್ಮಾಯಲ್ (1510–34), ಮುಲ್ಲು (1534–35), ಇಬ್ರಾಹಿಮ್ (1535–57), ಮೊದಲನೇ ಅಲಿ (1557–80), ಎರಡನೆಯ ಇಬ್ರಾಹಿಮ್ (1580–1626), ಮುಹಮ್ಮದ (1626–56), ಎರಡನೇ ಅಲಿ (1656–72) ಹಾಗೂ ಸಿಕಂದರ್ (1672–86) ಹೀಗೆ ಒಂಬತ್ತು ಜನ ಆಳಿದರು. ಹೆಚ್ಚಿನವರು ಶಿಯಾಗಳು. ಆದರೆ ಪರಧರ್ಮ ಸಹಿಷ್ಣುಗಳಾಗಿದ್ದರು. ಸೂಫಿ ಪಂಥ ನಾಡಿನುದ್ದಕ್ಕೂ ಹರಡಿ, ಹಿಂದೂ–ಮುಸ್ಲಿಮರ ಸಹಜೀವನಕ್ಕೆ ಅವಕಾಶ ಒದಗಿಸಲು ಉರುಸುಗಳು, ಮೊಹರಂದಲ್ಲಿ ಹುಲಿಕುಣಿತ, ಜಾನಪದ ಹಾಡುಗಾರಿಕೆಗಳಲ್ಲಿ ಭೇದಭಾವವಿಲ್ಲದೇ ಬೆರೆತುಹೋಗಲು, ಸೂಫಿ ಸಂತರ ಕುರಿತು ಹೆಚ್ಚಿನ ಗೌರವ ತಳೆದಿದ್ದ ಆದಿಲ್‌ಶಾಹಿ ಅರಸರು ಕಾರಣರಾಗಿದ್ದಾರೆ.

ಆದಿಲ್‌ಶಾಹಿಗಳ ಐದನೆಯ ಅರಸನಾಗಿದ್ದ ಅಲಿಯ ಜೊತೆಗೆ ಅಹಮ್ಮದ್ ಶಹನ ಮಗಳು ಚಾಂದ್ ಬೀಬಿಯ ವಿವಾಹವು 1564ರ ಹೊತ್ತಿಗೆ ಏರ್ಪಟ್ಟ ಮೇಲೆ ಬಿಜಾಪುರಕ್ಕೆ ಸಂಪತ್ತು, ನಲಿವು ಚೆಲುವುಗಳು ಹೆಚ್ಚೆಚ್ಚಾಗಿ ಒದಗಿ ಬಂದವು. ಇದಕ್ಕೆ 1565ರಲ್ಲಿ ವಿಜಯನಗರದೊಡನೆ ನಡೆದ ಯುದ್ಧ ಬಹುಮಟ್ಟಿಗೆ ಕಾರಣವಾದದ್ದನ್ನು ಮುಂದೆ ನೋಡುತ್ತೇವೆ. ಅದಕ್ಕೂ ಮೊದಲು ಬಹಮನಿ ರಾಜ್ಯ ಹೋಳಾದ ಬಳಿಕ ಸ್ವತಂತ್ರರಾದ ಇತರ ನಾಲ್ವರು ಶಾಹಿ ಅರಸರ ಬಗ್ಗೆ ಸಂಕ್ಷಿಪ್ತವಾಗಿ ತಿಳಿದುಕೊಳ್ಳೋಣ. ಆದಿಲ್‌ಶಾಹಿ ಅರಸರೊಂದಿಗೆ ಅವರೆಲ್ಲರ ಸಂಘರ್ಷ–ಸಂಧಾನ–ಸ್ನೇಹಗಳ ವರ್ತುಳ ನಡೆದೇ ಇತ್ತು!

**2. ಅಹಮ್ಮದ್ ನಗರದ ನಿಜಾಮ್‌ಶಾಹಿಗಳು :** (1490–1600) ಬಹಮನಿಗಳ ಅರಸ್ ಅಹಮ್ಮದ್ ಶಹನು ಒಂದು ವಿಜಯನಗರದ ದಂಡಯಾತ್ರೆಯಲ್ಲಿ ಇಬ್ಬರು ಬ್ರಾಹ್ಮಣರನ್ನು (ಗುಂಡ ಭಟ್ಟ ಮತ್ತು ತಿಮ್ಮ ಭಟ್ಟ)

ಗುಲಾಮರನ್ನಾಗಿ ಬೀದರಕ್ಕೆ ಕರೆತಂದು, ಧರ್ಮಾಂತರಗೊಳಿಸಿದ. ಅವರಲ್ಲಿ ಒಬ್ಬಾತ ಇಮಾದ್ ಉಲ್‌ಮುಲ್ಕ್ ಆಗಿ ಬೇರಾರ್ (ವಿದರ್ಭ) ರಾಜ್ಯ ಸ್ಥಾಪಿಸಿದ. ಇನ್ನೊಬ್ಬಾತ ಮಲಿಕ್ ಹಸನ್. ತನ್ನ ಬುದ್ಧಿಮತ್ತೆ, ಮುಂದಾಳ್ತನ ಚತುರತೆಗಳಿಂದ ನಿಜಾಮ್ ಉಲ್‌ಮುಲ್ಕ್ ಎಂಬ ಬಿರುದನ್ನೂ ಸಂಪಾದಿಸಿದ. ಇವನ ಮಗ ಮಲಿಕ್ ಅಹಮ್ಮದ್ ಬಹ್ರಿ ನಿಜಾಮ್ ಉಲ್‌ಮುಲ್ಕ್ ದೌಲತಾಬಾದದ ಗವರ್ನರನಾದ. 1490ರಲ್ಲಿ ತಾನು ಸ್ವತಂತ್ರ ರಾಜನೆಂದು ಘೋಷಿಸಿದ. ಬಳಿಕ ತನ್ನ ಹೆಸರಿನ ಅಹಮ್ಮದ್ ನಗರ ಎಂಬ ಭದ್ರವಾದ ಮತ್ತು ಸುಂದರವಾದ ಕೋಟೆಯನ್ನು ಕಟ್ಟಿಸಿದ. ಮುಂದೆ ಅಹಮ್ಮದ್ ನಗರದ ನಿಜಾಮ್‌ಶಾಹಿಗಳೆಂದೇ ಇತಿಹಾಸದಲ್ಲಿ ಗುರುತಿಸಲ್ಪಡುವ ಈ ವಂಶದಲ್ಲಿ ಏಳು ಜನ ಅರಸರು ರಾಜ್ಯವಾಳಿದರು. 1) ಅಹಮ್ಮದ್ ನಿಜಾಮ್ ಶಹ (1490–1509), 2) ಒಂದನೆಯ ಬುರ್ಹಾನ್ ಶಹ (1509–1553), 3) ಒಂದನೆಯ ಹುಸೇನ್ ನಿಜಾಮ್ ಶಹ (1553–1565), 4) ಮುರ್ತುಝ (1565–1588), 5) ಎರಡನೆಯ ಬುರ್ಹಾನ್ ಶಹ (1591–1595), 6) ಇಬ್ರಾಹಿಮ್ (1595–ಕೇವಲ ನಾಲ್ಕು ತಿಂಗಳು), 7) ಇಸ್ಮಾಯಿಲ್ ಮತ್ತು 8) ಬಹಾದೂರ್ (1600–ಮೊಗಲರ ಬಂದಿಯಾಗುವ ತನಕ). ಇವರಲ್ಲಿ ಮುರ್ತುಝನ ಆಳುವಿಕೆಯ ಕೊನೆಯ ವರ್ಷಗಳಲ್ಲಿ ಚಾಂದ್ ಬೀಬಿಯು ತನ್ನ ತವರು ಮನೆಯಾದ ಅಹಮ್ಮದ್ ನಗರಕ್ಕೆ ಬಂದವಳಿಗೆ ಬಾಲ ಸುಲ್ತಾನರ ಕಾಲದಲ್ಲಿ ರಾಜ್ಯ ಸೂತ್ರಗಳನ್ನು ತಾನೇ ವಹಿಸಿಕೊಂಡು ಪರಿಸ್ಥಿತಿ ನಿಭಾಯಿಸುವ ಪ್ರಸಂಗ ಬಂದಿತು. ಈ ಅವಧಿಯಲ್ಲೇ ಮೊಗಲರೊಡನೆ ಯುದ್ಧಮಾಡಿ ಅವರ ರಾಜ್ಯಾಕಾಂಕ್ಷೆಗೆ ತಣ್ಣೀರೆರಚಿ ಹಿಮ್ಮೆಟ್ಟಿಸಿದಳು. ಕೊನೆಗೂ ಮೂರು ವರ್ಷಗಳ ಬಳಿಕ ಅವರು ಬೃಹತ್ ಸೈನ್ಯದೊಡನೆ ಇನ್ನೊಮ್ಮೆ ಮುತ್ತಿಗೆ ಹಾಕಿದಾಗ ಮಾತ್ರ ಪ್ರಾಣಕಳೆದುಕೊಳ್ಳುವ ಪರಿಸ್ಥಿತಿಯೊದಗಿತು. ಕೊನೆಗೂ ಅಹಮ್ಮದ್ ನಗರವು ಮೊಗಲರ ವಶವಾಯಿತು.

**3) ಗೋಲ್ಕೊಂಡದ ಕುತುಬ್‌ಶಾಹಿಗಳು (1512–1687)** ಬಹಮನಿಗಳ ಮೂರನೆಯ ಮುಖ್ಯ ಪ್ರಾಂತವು ಅಥವಾ 'ತರಫ್'ವು ತೆಲಂಗಾಣದ ಪ್ರದೇಶವಾಗಿತ್ತು. ಇದನ್ನು ತನ್ನ ರಾಜ್ಯವಾಗಿ ಸ್ಥಾಪಿಸಿದ ಕುಲಿ ಕುತುಬ್ ಶಹ ಉಲ್‌ಮುಲ್ಕನು, ಯುಸೂಫ್ ಖಾನನಂತೆ ತುರ್ಕಿ ಮೂಲದವನೇ. ತುರ್ಕಸ್ತಾನ ಮತ್ತಿತರ ಮಧ್ಯಪ್ರಾಚ್ಯ ದೇಶಗಳಲ್ಲಿ ಆಯಾ ಅರಸರು ಮೃತರಾದೊಡನೆ, ಉತ್ತರಾಧಿಕಾರಿಗಳ ದಂಗೆ, ಸೋದರ ಸಂಬಂಧಿಗಳ ಕೊಲೆ

ಸಾಮಾನ್ಯವಾಗಿತ್ತು (ಭಾರತದಲ್ಲೂ ಇಂಥ ಘಟನೆಗಳನ್ನು ಮೊಗಲರ ಕಾಲಕ್ಕೆ ನೋಡುತ್ತೇವೆ). ಇಂಥ ಕೊಲೆಯಿಂದ ಉಳಿದುಕೊಳ್ಳಲು ಭಾರತಕ್ಕೆ ಓಡಿಬಂದವರಲ್ಲಿ ಯುಸೂಫ್ ಖಾನನು ಒಬ್ಬನಾದರೆ, ಕೊಂಚ ಮೊದಲು ಬಂದವರಲ್ಲಿ ಕುಲಿ ಕುತುಬ್ ಖಾನ್‌ನೂ ಚಾಂದ್ ಬೀಬಿಯ ಅಜ್ಜ, ತಂದೆ, ತಾಯಿ ಹಾಗೂ ಸೋದರ ಸಂಬಂಧಿ ಬೈರಾಮ್ ಖಾನ್‌ರೂ ಇದ್ದರು. ಇವರೆಲ್ಲ ಕಡಲಮಾರ್ಗವಾಗಿ ಬಹಮನಿಗಳ ಪ್ರಮುಖ ಬಂದರ್ ಆಗಿದ್ದ ಧಾಬೋಳಕ್ಕೆ ಬಂದಿಳಿದರು. ಉಳಿದವರು ಅಹಮ್ಮದ್ ನಗರಕ್ಕೆ ಹೋದರೆ ಬೈರಾಮ್ ಖಾನನು ಮೊಗಲರ ಆಗ್ರಾ ತಲಪಿದ. ಮುಂದೆ ಅಕ್ಬರ್ ಬಾದಶಹನ ಅತ್ಯಂತ ಆಪ್ತ ಸಲಹಾಕಾರನಾಗಿ ಬೆಳೆದ. ಆತನ ಮಗ ಖಾನ್-ಎ-ಖಾನಾನ್ ಅಬ್ದುಲ್ ರಹಮಾನನು, ಸಂಸ್ಕೃತ, ಫಾರಸಿ, ಬ್ರಜ್ ಭಾಷೆಗಳಲ್ಲಿ ಮಿಗಿಲಾದ ಪಾಂಡಿತ್ಯ ಪಡೆಯುವದರ ಜೊತೆಗೆ ಉತ್ತಮ ಸೇನಾಧಿಪತಿಯಾಗಿದ್ದ. ಯುಸೂಫ್ ಆದಿಲ್ ಶಹ, ಅಹಮ್ಮದ್ ನಿಜಾಮ್ ಶಹರಂತೆಯೇ ಕುಲಿ ಕುತುಬ್ ಶಹನೂ ಬಹಮನಿಗಳ ಇಳಿಗಾಲದಲ್ಲಿ, ಸಮಯ ಸಾಧಿಸಿ ಸ್ವತಂತ್ರನಾಗಿ (1512) ಗೋಲ್ಕೊಂಡದಿಂದ ರಾಜ್ಯವಾಳಲಾರಂಭಿಸಿದ. ಇವನ ಮಗ ಮಹಮದ್ ಕುಲಿ, ಭಾಗ್ಯ ನಗರ ಅಥವಾ ಈಗಿನ ಹೈದರಾಬಾದ ನಗರದ ನಿರ್ಮಾಣಕ್ಕೆ ಕಾರಣನಾದ. ಆ ಬಳಿಕ ಕ್ರಮವಾಗಿ ಆರು ಜನರು ಆಳಿದರು. ಇಬ್ರಾಹಿಮ್ ಕುತುಬ್ ಶಹನು ತನ್ನ ಆಡಳಿತಕಾಲದಲ್ಲಿ ಇತರ ಶಾಹಿ ಅರಸರೊಡನೆ ಒಂದಾಗಿ 1565ರ ರಕ್ಕಸ ತಂಗಡಗಿ ಕಾಳಗದಲ್ಲಿ ವಿಜಯನಗರದ ಸೋಲಿಗೆ ಕಾರಣನಾದ. ಈ ಇಬ್ರಾಹಿಮ್ ಕುತುಬ್ ಶಹ ಪ್ರಜಾವತ್ಸಲನೆಂದು ಹೆಸರಾಗಿದ್ದಾನೆ. ಹಿಂದೂಗಳಿಗೆಲ್ಲ ಉಚ್ಚ ಸ್ಥಾನಗಳನ್ನು ಆಡಳಿತದಲ್ಲಿ ಕೊಡಮಾಡಿದ. ವಿದ್ವಾಂಸರಿಗೆ ಭೂಮಿ ದಾನಮಾಡಿದ. ತೆಲುಗು ಕವಿಗಳಿಗೆ ರಾಜಾಶ್ರಯವಿತ್ತ.

ಗೋಲ್ಕೊಂಡವು ವಜ್ರದ ಖಣಿಗಳಿಗೆ ಜಗತ್ಪ್ರಸಿದ್ಧವಾಗಿತ್ತು. ಪ್ರಸಿದ್ಧ ಕೊಹಿನೂರ ವಜ್ರ ದೊರಕಿದ್ದು ಇಲ್ಲಿಯೇ! ವಜ್ರ ವ್ಯಾಪಾರಿಗಳಾಗಿ ಬಂದ ವಿದೇಶೀ ಪ್ರವಾಸಿಗರಿಂದ ಗೋಲ್ಕೊಂಡದ ಆ ಕಾಲದ ಭಾರತದ ರಾಜಕೀಯ ಹಾಗೂ ಸಾಮಾಜಿಕ ಜೀವನದ ಒಳನೋಟಗಳು ದೊರೆಯುತ್ತವೆ.

ಕುತುಬ್ ಶಾಹಿಗಳು ನಿರ್ಮಿಸಿದ ಬಲವಾದ ಗೋಲ್ಕೊಂಡ ಕೋಟೆ ಅತ್ಯಂತ ಜನಪ್ರಿಯ ಪ್ರವಾಸ ತಾಣವಾಗಿದೆ.

4. ಬೀದರದ ಬರೀದ್‌ಶಾಹಿಗಳು : (1529-1619) ಈ ವಂಶದ ಮೂಲ ಪುರಷನಾಗಿದ್ದ ಕಾಸೀಂ ಬರೀದನೂ ಮಧ್ಯ ಏಶ್ಯದ ಜಾರ್ಜಿಯದಿಂದ ಬಂದು ಮೂರನೆಯ ಮಹಮೂದನ ಕಾಲದಲ್ಲಿ ಸೇನೆಗೆ ಸೇರಿಕೊಂಡಿದ್ದ. ಕೊಂಕಣದ ಅಧಿಪತಿ ಬಹದೂರ್ ಜಿ(ಗಿ)ಲಾಗಿ ಬಂಡೆದ್ದಾಗ ಬಹಮನಿಗಳ ಸೇನಾ ನಾಯಕನಾಗಿ ಅವನನ್ನು ಸೋಲಿಸಿದ. ಮಹಮ್ಮದ ಗವಾನನ ಹತ್ಯೆಯಾದ ಬಳಿಕ ಅವನ ಸ್ಥಾನಕ್ಕೆ ವಝೀರ್ ಎಂದು ಅರಸು ಮಹಮೂದನಿಂದ ನೇಮಿಸಲ್ಪಟ್ಟ. ಕೊನೆಕೊನೆಯ ಬಹಮನಿ ಅರಸರು ದುರ್ಬಲರಾಗಿದ್ದರಿಂದ ಕಾಸೀಂ ಬರೀದನು ಸರ್ವಾಧಿಕಾರಿಯಾದ. ಅವನ ಮಗ ಅಮೀರ್ ಬರೀದನು 1529ರಲ್ಲಿ ಸ್ವತಂತ್ರ ಅರಸನಾದ. ಇತರ ಶಾಹಿಗಳೊಡನೆ ಆಗಾಗ ಷಡ್ಯಂತ್ರಗಳನ್ನು ಮಾಡಿಕೊಂಡು ತನ್ನ ರಾಜ್ಯವನ್ನು ಬಲಪಡಿಸುವದರಲ್ಲಿ ನಿಪುಣನಾಗಿದ್ದ. ಬಿಜಾಪುರದ ಇಸ್ಮಾಯಿಲನು ಬೀದರ ಮೇಲೆ ಹಲ್ಲೆಮಾಡಿ ಅಲೀ ಬರೀದನನ್ನು ಸೋಲಿಸಿದ. ಆದರೆ ಆತನು ರಾಯಚೂರ ಮುದ್ಗಲ್ ಕೋಟೆಗಳನ್ನು ವಿಜಯನಗರದಿಂದ ಗೆಲ್ಲಲು ಸಹಾಯಮಾಡಿದ್ದರಿಂದ ಇಸ್ಮಾಯಿಲನು ಬೀದರ ರಾಜ್ಯವನ್ನು ಅವನಿಗೇ ವಹಿಸಿ ಮರಳಿದ. ಇವನ ಮಗ ಅಲೀ ಬರೀದನು (1542-80) ಬರೀದ ಶಹನೆಂದು ಅಧಿಕೃತವಾಗಿ ಘೋಷಿಸಿಕೊಂಡ. ಆತನಕ ಬಹಮನಿಗಳ ಉತ್ತರಾಧಿಕಾರಿಗಳೆಂದು ತಮ್ಮನ್ನು ಕರೆದುಕೊಂಡರೂ, ಕೊನೆಯ ಅರಸನು ಬದುಕಿರುವತನಕ 'ಶಹ' ಬಿರುದು ಧರಿಸಲು ಬರೀದ್ ಅರಸರು ಅಳುಕುತ್ತಿದ್ದರು.

ಬಿಜಾಪುರದ ರಾಜಕುವರಿಯನ್ನು ಅಲೀ ಬರೀದನು ಮದುವೆಯಾಗಿದ್ದ. ಪರಸ್ಪರ ಕಚ್ಚಾಡುತ್ತಿದ್ದ ಶಾಹಿಗಳು 1565ರಲ್ಲಿ ಕೊನೆಗೊಮ್ಮೆ ಒಂದಾಗಿ ವಿಜಯನಗರವನ್ನು ಸೋಲಿಸಿದ್ದರು. ಈ ಯುದ್ಧದಲ್ಲಿ ಪಾಲ್ಗೊಂಡರೂ ಏನು ಲಾಭವಾಗದೇ ಇದ್ದ ಅರಸನೆಂದರೆ ಆಲಿ ಬರೀದ್ ಒಬ್ಬನೇ! ಈ ವಂಶದ ಆರು ಜನ ಆಳಿದರೂ ಕೊನೆಕೊನೆಗೆ ದುರ್ಬಲರಾಗುತ್ತ ಬಿಜಾಪುರದ ಇಮ್ಮಡಿ ಇಬ್ರಾಹಿಮ್ ಆದಿಲ್ ಶಹನು ಬೀದರ್‌ವನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿಕೊಂಡಾಗ ಬರೀದ್‌ಶಾಹಿಗಳ ಆಳುವಿಕೆ ಅಂತ್ಯವಾಯಿತು.

ಬೀದರದಲ್ಲಿ ಬಹಮನಿಗಳ ಹಲವಾರು ಸ್ಮಾರಕಗಳೊಂದಿಗೆ ಬರೀದ್‌ಶಾಹಿಗಳ ಕಾಲದ ಸುಂದರ ಕಟ್ಟಡಗಳ ಅವಶೇಷಗಳು ಗತ ವೈಭವವನ್ನು ಸಾರುತ್ತ ನಿಂತಿವೆ. ದೊಡ್ಡ ಎರಡು ತೋಫುಗಳೂ ಅಲ್ಲಿವೆ.



ಬೀದರ್‌ನಲ್ಲಿರುವ ದೊಡ್ಡ ತೋಪು

ಮಿಶ್ರಧಾತುಗಳ 'ಬಿದರಿ' ಕಲಾಕೃತಿಗಳು ತುಂಬ ಪ್ರಸಿದ್ಧವಾಗಿವೆ. ಮಧ್ಯಪ್ರಾಚ್ಯದ ಕಲಾಕಾರರನ್ನು ಕರೆಸಿಕೊಂಡು, ಬರೀದ್‌ಶಾಹಿಗಳು ತಮ್ಮ ನಾಡಿನವರೂ ಈ ಕಲೆಯಲ್ಲಿ ಮಿಗಿಲಾಗುವಂತೆ ನೋಡಿಕೊಂಡರು.

5. **ಬೇರಾರಿನ ಇಮಾದ್‌ಶಾಹಿಗಳು : (1482–1574)** ಬಹಮನಿಗಳ ರಾಜ್ಯದ ತೀರ ಉತ್ತರಕ್ಕಿದ್ದ ಈ ಪ್ರಾಂತಕ್ಕೆ ಆ ರಾಜ್ಯ ಒಡೆದು ಮೊಟ್ಟಮೊದಲು ಸ್ವಾತಂತ್ರ್ಯ ಘೋಷಿಸಿದ ಹಿರಿಮೆ ಸಲ್ಲುತ್ತದೆ! ವಿದರ್ಭವೆಂದು ಈಗ ಗುರುತಿಸಲ್ಪಟ್ಟ ಪ್ರದೇಶ ಬಹಮನಿಗಳ ಕಾಲಕ್ಕೆ ಎರಡು ದೊಡ್ಡ ಭಾಗಗಳನ್ನು ಒಳಗೊಂಡಿತ್ತು. ಉತ್ತರದಲ್ಲಿ ಗಾವಿಲ್ ಮತ್ತು ದಕ್ಷಿಣದಲ್ಲಿ ಮಾಹುರ್ ಇಮಾದ್ ಉಲ್‌ಮುಲ್ಕ 1482ರಲ್ಲಿ ಸ್ವತಂತ್ರರಾದರು. ನಾಲ್ವರು ಶಹರು ಆಳಿದ ನಂತರ 1574ರಲ್ಲಿ ಅಹಮ್ಮದ್ ನಗರದ ನಿಜಾಮ್‌ಶಾಹಿಗಳು ಬೇರಾರನ್ನು ವಶಪಡಿಸಿಕೊಂಡರು. ಮತ್ತೆ ಮತ್ತೆ ಮೊಗಲರ, ಅದಕ್ಕೂ ಮೊದಲು ಮತ್ತಿತರ ಅರಸರ ದಾಳಿಗೆ ಬೇರಾರ ತುತ್ತಾಗುತ್ತಲೇ ಇತ್ತು. ಮೊಗಲರ ಮುತ್ತಿಗೆಗೆ ಒಳಗಾಗಿದ್ದ ಕಾಲದಲ್ಲಿ ಅಹಮ್ಮದ್ ನಗರವು ಬೇರಾರನ್ನು ಬಿಟ್ಟುಕೊಟ್ಟು ಮೊಗಲರೊಂದಿಗೆ ಸಂಧಾನ ಮಾಡಿಕೊಂಡಿತ್ತು. ದಖ್ಖನಿನ ಇತಿಹಾಸದಲ್ಲಿ ಇಮಾದ್ ಶಾಹಿಗಳು ಯಾವುದೇ ಪ್ರಮುಖ ಪಾತ್ರ ವಹಿಸಿದ ದಾಖಲೆ ಇಲ್ಲ.

## ರಕ್ಕಸ–ತಂಗಡಿ : ವಿಜಯನಗರ ಸಾಮ್ರಾಜ್ಯ ಮತ್ತು 1565ರ ಮಹಾಯುದ್ಧ

ದಖ್ಖನ್ ಪ್ರದೇಶದಲ್ಲಿ ಐದು ಶಾಹಿ ರಾಜ್ಯಗಳು ಬಹಮನಿ ಸಾಮ್ರಾಜ್ಯದಿಂದ ಬೇರ್ಪಟ್ಟು ಹುಟ್ಟಿ ಬೆಳೆಯುತ್ತಿದ್ದ ಕಾಲ. ಅದು ವಿಜಯನಗರ ಸಾಮ್ರಾಜ್ಯವು ಶ್ರೀಕೃಷ್ಣದೇವರಾಯನ ಮತ್ತು ಆ ಬಳಿಕದ ಆಡಳಿತ ವೈಭವದ ಶಿಖರಕ್ಕೇರಿದ ಕಾಲವಾಗಿತ್ತು. ಬಹಮನಿಗಳೊಡನೆ ಘರ್ಷಣೆ, ರಾಜ್ಯ ವಿಸ್ತಾರಕ್ಕಾಗಿ, ರಾಯಚೂರ (ಕೃಷ್ಣಾ–ತುಂಗಭದ್ರಾದ ಫಲವತ್ತಾದ ಪ್ರದೇಶ) ಮುದ್ಗಲ್ ಕೋಟೆಗಳಿಗಾಗಿ, ಗೋವೆಯ ಅಂತಾರಾಷ್ಟ್ರೀಯ ಬಂದರಕ್ಕಾಗಿ ಆಗಾಗ ಘರ್ಷಣೆಗಳು ನಡೆದು ಒಬ್ಬರ ಕೈ ಮೇಲಾಗುವದು ನಡೆದೇ ಇತ್ತು. ಆದರೆ ಈಗ ಚಿಕ್ಕ ರಾಜ್ಯಗಳಾಗಿ ಮಾರ್ಪಟ್ಟ ಶಾಹಿಗಳು, ತಂತಮ್ಮ ರಾಜ್ಯ ವಿಸ್ತಾರಕ್ಕಾಗಿ, ಕೆಲಬಾರಿ ತಮ್ಮ ಗಡಿ, ಕೋಟೆಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಪರಸ್ಪರ ಹೋರಾಟಕ್ಕೆ ತೊಡಗುವದು ಅನಿವಾರ್ಯವೆಂದು ಭಾವಿಸಿದವು. ಇದಕ್ಕಾಗಿ ಬಲಾಢ್ಯವಾಗಿದ್ದ ವಿಜಯನಗರದ ಸಹಾಯ ಪಡೆಯುವದು ಅತ್ಯವಶ್ಯವಾಗಿತ್ತು. ತಾವೇ ಬಹಮನಿಗಳ ನಿಜವಾದ ಉತ್ತರಾಧಿಕಾರಿಗಳೆಂದು ನಂಬಿದ ಬೀದರದ ಬರೀದ್‌ಶಾಹಿಗಳು ಬದುಕಿಕೊಂಡಿದ್ದೇ ವಿಜಯನಗರದ ಸೈನ್ಯ ಸಹಾಯದಿಂದ! ಇಲ್ಲದಿದ್ದರೆ ಅಹಮ್ಮದ್‌ಶಾಹಿ, ಆದಿಲ್‌ಶಾಹಿ, ಕುತುಬ್ ಶಾಹಿಗಳು ಒಟ್ಟಾಗಿ, ಅದನ್ನು ಎಂದೋ ಮಣ್ಣು ಮುಕ್ಕಿಸಿ ಆ ಪ್ರದೇಶವನ್ನು ತಮ್ಮಲ್ಲಿ ಹಂಚಿಕೊಂಡುಬಿಡುತ್ತಿದ್ದವು. ವಿಜಯನಗರದ ಸಹಾಯದಿಂದಲೇ ಗೋವಳಕೊಂಡದ ಪಟ್ಟವೇರಲು ಕುಲಿ ಕುತುಬ್‌ನಿಗೆ ಸಾಧ್ಯವಾಗಿತ್ತು. ಅದರಂತೆ ತಂತಮ್ಮ ರಾಜ್ಯದ ಏಳ್ಗೆ ಹಾಗೂ ರಕ್ಷಣೆಗಾಗಿ, ಪ್ರತಿ ಶಾಹಿ ರಾಜ್ಯವೂ ವಿಜಯನಗರದ ಸಹಾಯ ಪಡೆಯಲಾರಂಭಿಸಿತು!

ಆಗಿನ ವಿಜಯನಗರದ ರಾಜರಾದ ಅಚ್ಯುತ ದೇವರಾಯ, ಸದಾಶಿವರಾಯರು, ಕುಶಲಮತಿ ಹಾಗೂ ಪರಾಕ್ರಮಶಾಲಿಗಳಾಗಿರದಿದ್ದರಿಂದ ಅಧಿಕಾರ ಚಲಾಯಿಸುವವರು ಕೃಷ್ಣದೇವರಾಯನ ಅಳಿಯ ರಾಮರಾಯ ಮತ್ತು ಆತನ ಸೋದರರಾಗಿದ್ದರು. ರಾಮರಾಯನು ಹಲವಾರು ಯುದ್ಧಗಳಲ್ಲಿ ಕಾದಿದ ನುರಿತ ಕಲಿಯಾಗಿದ್ದಂತೆ ರಾಜಕಾರಣ ತಂತ್ರದಲ್ಲೂ ಪ್ರವೀಣನಾಗಿದ್ದ. ಪ್ರತಿಬಾರಿ ಒಂದೊಂದು ಶಾಹಿ ರಾಜ್ಯ, ಸೈನ್ಯ ಸಹಾಯ ಕೇಳಿದಾಗ, ಅದನ್ನು ಒದಗಿಸಿ, ಪ್ರತಿಯಾಗಿ ತನ್ನ ಸಾಮ್ರಾಜ್ಯದ ಏಳ್ಗೆಗಾಗಿ ದೊಡ್ಡ ಪೊಗದಿ ಮತ್ತು ಆಯಕಟ್ಟಿನ ಸ್ಥಳಗಳನ್ನು ಪಡೆಯಲಾರಂಭಿಸಿದ! ಹೀಗಾಗಿ ದಕ್ಷಿಣ ಭಾರತದಲ್ಲಿ



ರಾಮರಾಯ

ವಿಜಯನಗರ ಸಾಮ್ರಾಜ್ಯ ಬಲಾಢ್ಯವಾಗುತ್ತ ನಡೆದಿತ್ತು. ಆದಿಲ್‌ಶಾಹಿ ಮತ್ತು ಅಹಮ್ಮದ್ ಶಾಹಿಗಳ ತಿಕ್ಕಾಟ, ಕೆಲವು ಕೋಟೆಗಳಿಗಾಗಿ ನಡೆದರೆ ಗೋವಳಕೊಂಡ ಮತ್ತು ಅಹಮ್ಮದ್ ಶಾಹಿಗಳು ತಮ್ಮಲ್ಲೇ ಪ್ರಬಲವಾಗುತ್ತಿದ್ದ ಆದಿಲ್‌ಶಾಹಿಗಳ ಸೊಕ್ಕುಮುರಿಯಲು, ಒಂದಾಗುತ್ತಿದ್ದವು. ಈ ಸಂದರ್ಭದಲ್ಲಿ ಆದಿಲ್‌ಶಾಹಿಗಳೂ ವಿಜಯನಗರಕ್ಕೆ ನಿಕಟರಾದರು. ಕೊನೆಗೊಮ್ಮೆ ಅಂದರೆ ಮೂರನೆಯ ಬಾರಿ ಅಲಿ ಆದಿಲ್ ಶಹನು 1563ರಲ್ಲಿ ಕುತುಬ್ ಶಹ, ಬರೀದ್ ಶಹ ಮತ್ತು ವಿಜಯನಗರದ ಸಹಾಯದಿಂದ ಕಲ್ಯಾಣದ ಕೋಟೆಯನ್ನು ಅಹಮ್ಮದ್ ನಗರದ ನಿಜಾಮ್ ಶಹನಿಂದ ಕಿತ್ತುಕೊಂಡ. ಮೂರೂ ಕಡೆಯಿಂದ ಲಗ್ಗೆಗೊಳಗಾದ ಅಹಮ್ಮದ್ ನಗರ ರಾಜ್ಯಕ್ಕೆ ಅಪಾರ ಹಾನಿಯಾಯಿತು.

ತಂತಮ್ಮ ವೈರತ್ವದಿಂದ ಲಾಭ ಪಡೆಯುತ್ತಿರುವವರು ವಿಜಯ ನಗರದವರು ಎಂದು ಅಹಮ್ಮದ್ ನಗರದ ಹುಸೇನ್ ನಿಜಾಮ್ ಶಹನು ಲೆಕ್ಕಹಾಕಿದ. ಸೋಲಿನ ಅವಮಾನ ನುಂಗಿಕೊಂಡು, ಇತರ ಶಹರೊಡನೆ ಸಂಧಾನವನ್ನು ಪ್ರಾರಂಭಿಸಿದ. ಧರ್ಮದ ಬಾಂಧವ್ಯ ಎತ್ತಿಹಿಡಿದ. ಅವರೆಲ್ಲ ಶಿಯಾ ಪಂಥದವರೇ ಆಗಿದ್ದರು. ಮೂಲದಲ್ಲಿ ಅಫಾಕಿಗಳಾಗಿದ್ದರೂ ಈ ನೆಲದ ಗುಣಾವಗುಣಗಳನ್ನೆಲ್ಲ ಅರಗಿಸಿಕೊಂಡು ಈಗ ಭಾರತೀಯರೇ ಆಗಿದ್ದರು! ತಾವು ಒಂದಾದ ಹೊರತು ಉಳಿಗಾಲ ವಿಲ್ಲವೆಂದು ಮನಗಂಡರು; ಪರಸ್ಪರ ಸೌಹಾರ್ದಕ್ಕಾಗಿ ಮುಂದಾದರು.

ವಿವಾಹ ಸಂಬಂಧಗಳು ರಾಜಮನೆತನಗಳನ್ನು ಬೆಸೆಯುವದು ಸಾಮಾನ್ಯ. ಅದರ ಪ್ರಕಾರ ಅಹಮ್ಮದ್ ನಗರದ ಹುಸೇನ್ ನಿಜಾಮ್ ಶಹನ ಮಗಳು ಚಾಂದ್ ಬೀಬಿಯನ್ನು ಮದುವೆಯಾಗಲು ಬಿಜಾಪುರದ ಅಲಿ ಆದಿಲ್ ಶಹನನ್ನು ಒಪ್ಪಿಸಲಾಯಿತು. ಆತನ ತಂಗಿ ಹದಿಯಾ ಬೇಗಂಳನ್ನು

ಅಹಮ್ಮದ್ ಹುಸೇನ್ ನಿಜಾಮ್ ಶಹನು ಸೊಸೆಯಾಗಿ ತನ್ನ ಮಗ ಮತ್ತು
ಭಾವೀ ಅರಸು ಮುರ್ತಾಝುನಿಗೆ ತಂದುಕೊಂಡ. ಎಂದಿಲ್ಲದ ಹೊಸನಂಟು
ಶಾಹಿ ಅರಸರನ್ನು ಬೆಸೆಯಿತು.

ದಕ್ಷಿಣ ಭಾರತದಲ್ಲಿ ಪ್ರಬಲನಾಗಿ, ವಿದೇಶೀಯರೆಲ್ಲರಿಂದ ಸ್ನೇ
ಅನಿಸಿಕೊಂಡಿದ್ದ ರಾಮರಾಯ, ದರ್ಪದಿಂದ ಬೀಗುತ್ತಿದ್ದ, ಆಯಾ ಶಾಹಿಗಳ
ರಾಯಭಾರಿಗಳನ್ನು ಅವಮಾನಿಸುತ್ತಿದ್ದ ಎಂದು ಮುಸ್ಲಿಂ ಇತಿಹಾಸಕಾರರು
ಬರೆಯುತ್ತಾರೆ. ತಂತಮ್ಮ ಅಂತಸ್ತಿಗೆ ತಕ್ಕಂತೆ ಗೌರವಿಸಲಿಲ್ಲ ಎಂಬ ನೋವು
ಶಾಹಿಗಳನ್ನು ಕಾಡುತ್ತಿತ್ತು. ಅವರೆಲ್ಲ ಒಟ್ಟಾಗಿ ವಿಜಯನಗರವನ್ನು ಎದುರಿಸಲು
ಪಣತೊಟ್ಟರು. ಎಲ್ಲರಿಗಿಂತ ಬಿಜಾಪುರದ ಅಲಿ ಆದಿಲ್ ಶಹ
ರಾಮರಾಯನಿಗೆ ನಿಕಟವಾಗಿದ್ದ.

ಶಾಹೀ ಒಕ್ಕೂಟದವರೆಲ್ಲ ಯುದ್ಧಸನ್ನದ್ಧರಾದದ್ದು ರಾಮರಾಯನಿಗೆ
ತಿಳಿಯಿತು. ಆದರೆ ತನ್ನ ಗೆಲವಿನಲ್ಲಿ ಆತನಿಗೆ ಪ್ರಚಂಡ ಆತ್ಮವಿಶ್ವಾಸವಿತ್ತು.
ಕ್ರಿಶ್ಚಿಯನ್, ಮುಸ್ಲಿಮರೆನ್ನುವ ಭೇದ ಮಾಡದೇ ಉನ್ನತ ಹುದ್ದೆಗಳನ್ನು
ಮುಸ್ಲಿಮರಿಗೆ ಕೊಡಮಾಡುವ ಪದ್ಧತಿ ವಿಜಯನಗರದಲ್ಲಿ ಹಿಂದಿನಿಂದ
ಬೆಳೆದುಬಂದಿತ್ತು. ಅದರಂತೆ ಶಾಹೀ ಒಕ್ಕೂಟದಲ್ಲಿಯೂ ಹಿಂದೂ ಸೈನಿಕರು
ಸಾಕಷ್ಟು ಸಂಖ್ಯೆಯಲ್ಲಿದ್ದರು. ಇದು ಧಾರ್ಮಿಕ ಕಾರಣಗಳಿಗಾಗಿ ಏರ್ಪಟ್ಟ
ಕಾದಾಟವಾಗಿರದೇ ರಾಜ್ಯ ವಿಸ್ತಾರ, ಪ್ರತಿಷ್ಠೆ, ಲಾಲಸೆಗಳಿಂದ
ಪ್ರಚೋದಿತವಾಗಿತ್ತು. ಶಾಹಿಗಳಿಗೆ ಕೀಳರಿಮೆ ಕಾಡುತ್ತಿತ್ತು. ಪರಸ್ಪರ
ದ್ವೇಷಾಸೂಯೆಗಳಿದ್ದರೂ, ವಿಜಯನಗರದಿಂದ ತಮಗೆ ಉಳಿಗಾಲವಿಲ್ಲೆಂದು
ಅನುಭವದಿಂದ ಕಂಡುಕೊಂಡಿದ್ದರಿಂದ 'ಶತಾಯ ಗತಾಯ' ಒಂದಾಗಿದ್ದರು.

1565ರ ಜನವರಿ 23ರಂದು ವಿಜಾಪುರ ರಾಜ್ಯದ ಗಡಿಯ ರಕ್ಕಸ-
ತಂಗಡಿ ಹಳ್ಳಿಗಳ ಬಳಿ ಎರಡೂ ಸೈನ್ಯಗಳು ಬೀಡುಬಿಟ್ಟವು. ಹಳೆ
ಹುಲಿಯೆಂದೇ ಹೆಸರಾಗಿದ್ದ ರಾಮರಾಯನ ಪದಾತಿದಳ, ಶಾಹೀ ಕೂಟಕ್ಕಿಂತ
ಸಾಕಷ್ಟು ದೊಡ್ಡದಿತ್ತು. ತನ್ನ ವಯಸ್ಸನ್ನು ಶಾಶ್ವತವೆಂದು ನಂಬಿದ್ದ ಆತ ಇತರರ
ಸಲಹೆಯನ್ನು ಲೆಕ್ಕಿಸದೇ ಸೈನ್ಯದ ಮುಂಚೂಣಿಯಲ್ಲಿ ಮೇಣೆಯಲ್ಲಿದ್ದ.
ಮೊದಮೊದಲಲ್ಲಿ ವಿಜಯನಗರದವರ ಕೈ ಮೇಲಾದರೂ ಕೊನೆ ಗಳಿಗೆಯಲ್ಲಿ
ಪರಿಸ್ಥಿತಿ ಬದಲಾಯಿತು. ರಾಮರಾಯ, ಶತ್ರುಗಳ ಕೈಗೆ ಸಿಕ್ಕಿಬಿದ್ದು
ಹತ್ಯೆಗೊಳಗಾದ. ಆತನ ಪದಾತಿ ದಳದಲ್ಲಿ ಕೋಲಾಹಲವೆದ್ದಿತು. ನಾಲ್ಕೂ
ಕಡೆಯಿಂದ ಮುನ್ನುಗ್ಗಿದ ಶಾಹೀ ಸೈನಿಕರು, ಸಿಕ್ಕಂತೆ ಓಡುತ್ತಿದ್ದವರನ್ನು



ರಕ್ಕಸ–ತಂಗಡಿ ಯುದ್ಧ

ಕೊಚ್ಚಿಹಾಕಿದರು. ಮುಸ್ಲಿಂ ಇತಿಹಾಸಕಾರರ ಹೇಳಿಕೆಯಂತೆ 1 ಲಕ್ಷ ವಿಜಯನಗರ ಸೈನಿಕರು ಹತರಾದರು. ಎರಡೂ ಕಾಲು ಶತಮಾನ (1336–1565) ಭಾರತವರ್ಷ್ವೇ ಏಕೆ, ವಿಶ್ವದಲ್ಲೇ ಕರ್ನಾಟಕಕ್ಕೆ ವಿಶಿಷ್ಟ ಸ್ಥಾನವೊಂದನ್ನು ಒದಗಿಸಿದ ಸಾಮ್ರಾಜ್ಯದ ಇಳಿಗಾಲಕ್ಕೆ, ಮಧ್ಯಯುಗದ ಈ ಮಹಾಯುದ್ಧ ನಾಂದಿಹಾಡಿತು.

ಶಾಹಿ ರಾಜ್ಯಗಳ 'ಅಸ್ತಿತ್ವಕ್ಕಾಗಿ ಹೋರಾಟ'ದ ಕೆಚ್ಚಿನ ಜೊತೆಗೆ ರಾಮರಾಯನ ಹುಸಿಯಾದ ಆತ್ಮವಿಶ್ವಾಸಗಳಲ್ಲದೇ ವಿಜಯನಗರದ ಸೋಲಿಗೆ ಬೇರೆ ಪ್ರಬಲ ಕಾರಣಗಳಿದ್ದವು. ಎಲ್ಲ ಶಾಹೀ ಅರಸರ ಅಶ್ವದಳ ಬಲವಾಗಿತ್ತು. ಕೆಚ್ಚೆದೆಯ ತುರ್ಕಿಸೈನಿಕರ ಅಶ್ವಶಕ್ತಿ, ತೋಫು ಮತ್ತು ಆಧುನಿಕ ಮದ್ದು ಗುಂಡುಗಳ ತುಬಾಕಿಗಳನ್ನು ರೂಢಿಸಿಕೊಂಡು ಪ್ರಪಂಚದಲ್ಲೇ ಮಿಗಿಲಾದ ಸೈನಿಕರಾಗಿ ಐರೋಪ್ಯರನ್ನೂ ಮಿರಿಸಿದ್ದರು. ಅಂಥವರಿಂದ ತರಬೇತಿ ಪಡೆದ ಶಾಹೀ ಪದಾತಿಗಳು ವಿಜಯನಗರದ ಸೈನ್ಯದ ಸಂಖ್ಯಾಬಲಕ್ಕಿಂತ ಕಡಿಮೆ ಇದ್ದರೂ ಮೇಲ್ಮಟ್ಟದ ಯೋಧರಾಗಿದ್ದರು. ಸಾಂಪ್ರದಾಯಿಕ ಗಜದಳ ಮತ್ತು ಕಾಲ್ದಳ ಅವರಿಗೆ ಈಡಾಯಿತು. ಆದಾಗಲೇ ವಿದೇಶಗಳಿಂದ ಕುದುರೆಗಳನ್ನು ತರಿಸುವುದನ್ನು ರಾಮರಾಯ ನಿಲ್ಲಿಸಿದ್ದನಂತೆ! ಫಿರಂಗಿ ಬಲಕ್ಕೂ ಆತ ಪೋರ್ಚುಗೀಸರ ಎರವಲು ಪಡೆಯ ಮೇಲೆ ಅವಲಂಬಿಸಿದ್ದನಲ್ಲದೇ ತನ್ನವರಿಗೆ ಆ ದಿಸೆಯಲ್ಲಿ ತರಬೇತಿ ನೀಡಿರಲಿಲ್ಲ.

ಸೀಝುರ್ ಫ್ರೆಡರಿಸಿ ಎಂಬ ಇಟಾಲಿಯನ್ ಪ್ರವಾಸಿ, ಹಾಗೂ ಆಂಕ್ವಟಿಲ್-ಡು-ಪೆರೊನ್ ಎಂಬ ಫ್ರೆಂಚ್ ಪ್ರವಾಸಿ ಬೇರೆ ಬೇರೆಯಾಗಿ ಬರೆದಿಟ್ಟ ಪ್ರವಾಸ ಕಥನಗಳಲ್ಲಿ, ವಿಜಯನಗರದ ಸೇವೆಯಲ್ಲಿದ್ದ ಇಬ್ಬರು, ಆದಿಲ್ ಶಹನಿಂದ ಅಮಾನತ್ತು ಹೊಂದಿದ ಮುಸ್ಲಿಂ ಸೇನಾನಾಯಕರ ವಿಶ್ವಾಸಘಾತದಿಂದ ಸೋಲು ಒದಗಿತ್ತು ಎಂಬ ಉಲ್ಲೇಖವಿದೆ. ರಾಮರಾಯನು ಆಯಕಟ್ಟಿನ ಸ್ಥಳಗಳಲ್ಲಿ ಈ ಇಬ್ಬರು ಗಿಲಾನಿ ಸೋದರರನ್ನು 50,000 ಸಾವಿರ ಸೈನ್ಯದೊಂದಿಗೆ ಸ್ಥಾಪಿಸಿದ್ದನಂತೆ. ನಿರ್ಣಾಯಕ ಕ್ಷಣದಲ್ಲಿ ಅವರಿಬ್ಬರೂ ಕೈಕೊಟ್ಟರಂತೆ!

# 4

# ಅನ್ಯೋನ್ಯ ಜೋಡಿ : ಅಲಿ ಆದಿಲ್ ಶಹ ಮತ್ತು ಚಾಂದ್ ಬೀಬಿ

ತಮ್ಮಲ್ಲಿಯ ಒಳಜಗಳಗಳೇ ವಿಜಯನಗರ ಸಾಮ್ರಾಜ್ಯದ ವಿಸ್ತಾರ ಮತ್ತು ಬೆಳವಣಿಗೆಗೆ ಕಾರಣವೆಂದು ಮನಗಂಡ ಶಾಹೀ ಅರಸರೆಲ್ಲ ಒಟ್ಟಾಗಿ ವಿಜಯನಗರದ ಸೈನ್ಯವನ್ನು ಸೋಲಿಸಿದರು. ಇದರ ಪರಿಣಾಮವೆಂದರೆ, ನೆರೆರಾಜ್ಯವಾದ ಬಿಜಾಪುರಕ್ಕೆ ಯುದ್ಧಾನಂತರದ ಅಪಾರ ಸುಲಿಗೆಯಲ್ಲಿ ಸಿಂಹಪಾಲು ದಕ್ಕಿತ್ತು. ಜೊತೆಗೆ ಕೃಷ್ಣಾ, ತುಂಗಭದ್ರಾ ನದಿಗಳ ಫಲವತ್ತಾದ ದೊಡ್ಡ ಭೂಮಿಯೇ ಇವರ ಪಾಲಾಯಿತು. ಮೊದಲೇ ಇತರ ಶಾಹಿ ಅರಸರಿಗಿಂತ ವಿಸ್ತಾರವಾದ, ಅಚ್ಚುಕಟ್ಟಾಗಿ ಆಡಳಿತಕ್ಕೊಳಗಾದ ಪ್ರದೇಶ ಅವರಿಗಿತ್ತು. ಈಗ ಅವರ ರಾಜ್ಯ ಇದ್ದಕ್ಕಿದ್ದಂತೆ ತುಂಬ ಶ್ರೀಮಂತವಾಗಿಬಿಟ್ಟಿತು! ವಿದ್ಯಾಪ್ರೇಮಿಗಳೂ ಕಲಾಸಕ್ತರೂ ಆಗಿದ್ದ ಆದಿಲ್ ಶಾಹಿಗಳು ಈ ಸಂಪತ್ತನ್ನು ಬಳಸಿಕೊಂಡು, ತಮ್ಮ ನಾಡನ್ನು ಅಪರೂಪದ ವಾಸ್ತುಶಿಲ್ಪ, ಹಲವಾರು ಕಲೆಗಳು ಮತ್ತು ಸಾಹಿತ್ಯ ಪ್ರಕಾರಗಳಿಂದ ಶ್ರೀಮಂತ ನಾಡನ್ನಾಗಿ ಪರಿವರ್ತಿಸಿದರು. ಇರಾಕ್ ದೇಶದ ಬಗದಾದ್ ನಗರ, ಅಂದಿನ ಪಶ್ಚಿಮ ಜಗತ್ತಿನ ಕಣ್ಮಣಿಯಾಗಿ ವಿದ್ಯೆಯ ಆಗರವಾಗಿತ್ತು. ಬಿಜಾಪುರವು (ಪೂರ್ವದ) ಎರಡನೆಯ

ಬಗದಾದ್ ಎಂಬ ಕೀರ್ತಿಗೆ ಭಾಜನವಾಯಿತು. ಇದಕ್ಕೆ ಅಲಿ ಆದಿಲ್ ಶಹ - ಚಾಂದ್‌ಬೀಬಿ ದಂಪತಿ ಹಾಗೂ ಅವರ ಸಾಕುಮಗ ಮತ್ತು ಅಲಿಯ ನಂತರದ ಬಾದಶಹನಾಗಿದ್ದ ಇಮ್ಮಡಿ ಇಬ್ರಾಹಿಮ್ ಬಹುಮಟ್ಟಿಗ ಕಾರಣರಾಗಿದ್ದಾರೆ.

**ಒಂದನೆಯ ಅಲಿ ಆದಿಲ್ ಶಹನ ವ್ಯಕ್ತಿತ್ವ (1557 ರಿಂದ 1580) :** ಬಹುಶ 1534ರಲ್ಲಿ ಹುಟ್ಟಿರಬಹುದಾದ ಅಲಿಯು, ಆದಿಲ್‌ಶಾಹಿಗಳ ನಾಲ್ಕನೆಯ ದೊ ಮೊದಲನೆಯ ಇಬ್ರಾಹಿಮನ ಮಗ. ಎಲ್ಲಾ ಆದಿಲ್‌ಶಾಹಿಗಳು ವಿದ್ಯಾವಂತರಾಗಿದ್ದರು. ಖ್ಯಾತ ವಿದ್ವಾಂಸರನ್ನೆಲ್ಲ ತಮ್ಮಲ್ಲಿ ಬರಮಾಡಿಕೊಂಡು ನೆಲೆಸಲು ಪ್ರೋತ್ಸಾಹಿಸುತ್ತಿದ್ದರು. ಅವರಲ್ಲಿ ಅಲಿ ಆದಿಲ್ ಶಹನು ಮೀರಿದ ವಿದ್ವಾಂಸನಾಗಿದ್ದ. ಬೇರೆ ಬೇರೆ ಧರ್ಮಗಳು, ಸಸ್ಯಶಾಸ್ತ್ರ, ತರ್ಕಶಾಸ್ತ್ರ, ವಿಜ್ಞಾನ ವ್ಯಾಕರಣ ಮತ್ತು ಶಬ್ದ ಶಾಸ್ತ್ರಗಳು ಆತನ ವಿಶೇಷ ಆಸಕ್ತಿಯ ವಿಷಯಗಳಾಗಿದ್ದವು. ಈತನ ಓದುವ ಹವ್ಯಾಸ ಪ್ರಸಿದ್ಧವಿದೆ. ಪ್ರವಾಸ ಸಂದರ್ಭದಲ್ಲಿ, ಯುದ್ಧ ಪ್ರಸಂಗದ ಬಿಡದಿಗಳಲ್ಲೂ ಆತನ ಓದು ಮುಂದುವರಿಯುತ್ತಿದ್ದುದರಿಂದ ಹೊರ ಹೊರಟಾಗೊಮ್ಮೆ 4 ಪೆಟ್ಟಿಗೆಗಳಲ್ಲಿ ಪುಸ್ತಕಗಳು ಅವನನ್ನು ಹಿಂಬಾಲಿಸುತಿದ್ದವಂತೆ. ಅದಾಗಲೆ ಕಾಗದವು ಬಳಕೆಯಲ್ಲಿ ಬಂದು ಅಂದವಾದ ಕಾಗದದ ಮೇಲೆ ಸುಂದರ ವಿನ್ಯಾಸದ ಲಿಪಿಗಳಲ್ಲಿ ಬೇರೆ ಬೇರೆ ಪ್ರಕಾರದ ಶಾಸ್ತ್ರ ಸಾಹಿತ್ಯ, ವಿಜ್ಞಾನ, ಕಾವ ಪ್ರಕಾರಗಳು ಬರೆಯಲ್ಪಟ್ಟು ಪ್ರಚಲಿತ ವಾಗುತ್ತಿದ್ದವು. ಆಯಾ ಸಂದರ್ಭಕ್ಕನುಸಾರವಾಗಿ ಬೆಳೆದು ಬಂದ ಅಲಂಕೃತ ಫಾರಸಿ ಲಿ ಪ್ರಕಾರಗಳು, ಕಲಾ ಜಗತ್ತಿಗೆ ಇಸ್ಲಾಂ ಧರ್ಮದ ಕೊಡು ಆಗಿವೆ. ಮೊದಲ ಅಲಿಯು ಈ ಅಲಂಕರಣ ಲಿಪಿಯ



ಒಂದನೆಯ ಅಲಿ ಆದಿಲ್ ಶಹ



ಒಂದನೆಯ ಆದಿಲ್ ಶಹ ಕಟ್ಟಿಸಿದ ಬಾರಾಕಮಾನ, ಬಿಜಾಪುರ

ಪ್ರಕಾರಗಳಲ್ಲಿ ಅಸಾಮಾನ್ಯ ಪ್ರಾವೀಣ್ಯ ಹೊಂದಿದ್ದನಂತೆ! ಲಿಪಿಗಳಲ್ಲಿ ನಿಷ್ಣಾತರಾಗಿದ್ದ ದೇಶ-ವಿದೇಶಗಳ ಕಲಾಕಾರರನ್ನು ಆಸ್ಥಾನಕ್ಕೆ ಬರಮಾಡಿಕೊಂಡಿದ್ದ. ಅಲ್ಲದೇ ಆ ಪರಿಣತ ಕಲಾಕಾರರ ಪ್ರತಿ ಎತ್ತುವವರ ತಪ್ಪುಗಳನ್ನು ಕಂಡುಹಿಡಿಯುವಷ್ಟು ಸೂಕ್ಷ್ಮಗ್ರಾಹಕತ್ವವನ್ನು ಬೆಳೆಸಿಕೊಂಡಿದ್ದ. ಇದೇ ಸಂಪ್ರದಾಯ ಆತನ ಸಾಕು ಮಗ ಇಮ್ಮಡಿ ಇಬ್ರಾಹಿಮನ ಕಾಲದಲ್ಲಿ ನಡೆದುಬಂದಿತು.

ಕಲಾಪ್ರೇಮದಂತೆಯೇ ಅಲಿಗೆ ಜ್ಯೋತಿಷ, ಸಾಹಿತ್ಯಗಳಲ್ಲಿ ಹೆಚ್ಚಿನ ಆಸಕ್ತಿ ಇತ್ತು. ಅನೇಕ ಸೂಫಿ ಸಂತರನ್ನು ಆಸ್ಥಾನಕ್ಕೆ ಬರಮಾಡಿಕೊಂಡ.

ಅಲಿ ಆದಿಲ್ ಶಹನು ಹಿಂದೂ-ಮುಸ್ಲಿಂ ಭೇದ-ಭಾವವಿಲ್ಲದೇ ಸಂತರು, ತತ್ವವೇತ್ತರೊಡನೆ ಚರ್ಚೆಯಲ್ಲಿ ಬಿಡುವಿನ ಸಮಯ ಕಳೆಯುತ್ತಿದ್ದನಂತೆ. ಕೆಲವೊಮ್ಮೆ ಸನ್ಯಾಸಿಗಳ ಬಟ್ಟೆ ತೊಡುತ್ತಿದ್ದನಂತೆ. ಆತನ ಹತ್ತಾರು ಅಭಿರುಚಿಗಳಿಗೆ ತಕ್ಕಂತೆ ಬಹುಮುಖ ಪ್ರತಿಭೆಯ ಪತ್ನಿ ದೊರೆತಳು. ಸುವರ್ಣಕ್ಕೆ ಸುವಾಸನೆ ಸೇರಿದಂತೆ ಚಾಂದ್ ಬೀಬಿ, ಅಲಿಯ ಬಾಳಸಂಗಾತಿಯಾಗಿ ಆತನ ಆಸಕ್ತಿಗಳಿಗೆ ಪುಟ ದೊರೆಯಿತು. ಕೆರೆಗಳ, ಉದ್ಯಾನಗಳ ನಿರ್ಮಾಣ, ಚಿತ್ರಕಲೆ, ಕಾವ್ಯ, ಬೇಟೆ, ವಾಸ್ತು ಪ್ರಕಾರಗಳಲ್ಲಿ ಪ್ರಯೋಗಗಳು, ಇಬ್ಬರ ಆಸಕ್ತಿಯ ವಿಷಯಗಳಾಗಿದ್ದವು. ಬಹು ಪತ್ನಿತ್ವ ರೂಢಿಯಿದ್ದ ದಿನಗಳಲ್ಲಿ ಅಲಿಗೆ ಇನ್ನೊಬ್ಬ ಪತ್ನಿ ಇದ್ದ ದಾಖಲೆ ಸಿಕ್ಕಿಲ್ಲ! ತುಂಬ ಅನ್ಯೋನ್ಯವಾಗಿದ್ದರು.

# 5

# ಚಾಂದ್ ಬೀಬಿಯ ಬಾಲ್ಯ, ಯೌವನ

ದಖ್ಖಿನಕ್ಕೆ ಹೆಬ್ಬಾಗಿಲು ಎಂಬಂತೆ ಇದ್ದ ಅಹಮ್ಮದ್ ನಗರದ ರಾಜಧಾನಿ ದೌಲತಾಬಾದ್ (ಯಾದವರ ದೇವಗಿರಿ), ನಿಜಾಮ್‌ಶಾಹಿಗಳಿಗೆ ಕೊನೆಯರಿಯದ ತಲೆನೋವಾಗಿತ್ತು. ಉತ್ತರ-ಪಶ್ಚಿಮಗಳಿಂದ ಪುನಃ ಪುನಃ ದಂಡೆತ್ತಿ ಬರುವ ಪ್ರದೇಶವಾಗಿತ್ತು. ಹೀಗಾಗಿ ಮೊದಲ ಅರಸು ಅಹಮ್ಮದ್ ನಿಜಾಮ್ ಉಲ್‌ಮುಲ್ಕನು ಸುರಕ್ಷಿತ ಸ್ಥಳವನ್ನು ಆರಿಸಿ, ಭದ್ರವಾದ ಮತ್ತು ಕಲಾಪೂರ್ಣವಾದ ಅಹಮ್ಮದ್ ನಗರ ಕೋಟೆಯನ್ನು ಕಟ್ಟಿಸಿದ. ಅಹಮ್ಮದ್ ಶಾಹಿಯ ಮೂರನೆಯ ಅರಸು ಹುಸೇನ್ ನಿಜಾಮ್ ಶಹನು (1552–65), ಯುದ್ಧತಂತ್ರದಲ್ಲಿ ಅತಿ ಕುಶಲ ವಾಸ್ತು ಶಿಲ್ಪಿ ಮತ್ತು ತೋಫು (ಫಿರಂಗಿ) ನಿರ್ಮಾಣದಲ್ಲಿ ಪಾರಂಗತರಾಗಿದ್ದ ತುರ್ಕಿಸ್ತಾನದ ತಜ್ಞರಿಗೆ ಆಶ್ರಯವಿತ್ತಿದ್ದ. ಇವರಲ್ಲಿ ಚುಲ್ಬಿರುಮಿ ಖಾನನದು ದೊಡ್ಡ ಹೆಸರು. ಮಾಲಿಕ್-ಎ-ಮೈದಾನ್ (ರಣರಂಗದ ಮೂಲಕ ಅಥವಾ ಸುಲ್ತಾನ್) ಎಂಬ ವಿಸ್ಮಯಕಾರಿ ತೋಫು ಇಂದಿಗೂ ರುಮಿ ಖಾನನ ಅದ್ಭುತ ಕೈ ಚಳಕದ ಮಾದರಿಯಾಗಿ ಬಿಜಾಪುರದ ಕೋಟೆಯಲ್ಲಿ ಶೋಭಿಸುತ್ತಿದೆ. ಬೀಡು ಹಿತ್ತಾಳೆಯಿಂದ

ನಿರ್ಮಿತವಾದ 55 ಟನ್ ತೂಕದ, 14 ಅಡಿ 4 ಇಂಚು ಉದ್ದದ, 2 ಅಡಿ 4 ಇಂಚು ಅಗಲದ ಹಾಗೂ ಅಷ್ಟೇ ಪ್ರಮಾಣದ ವ್ಯಾಸದ ಮಾಲಿಕ್-ಎ-ಮೈದಾನ್, ಜಗತ್ತಿನಲ್ಲೇ ದೊಡ್ಡದಾದ ಹಿತ್ತಾಳೆಯಿಂದ ನಿರ್ಮಿತವಾದ ತೋಫಾಗಿದೆ! 1562ರಲ್ಲಿ ರಾಮರಾಯನ ಸಹಾಯದಿಂದ ಅಲಿ ಆದಿಲ್‌ಶಹನು, ಹುಸೇನ್ ನಿಜಾಮ್ ಶಹನನ್ನು ಸೋಲಿಸಿದಾಗ ಆತನು ಈ ತೋಫನ್ನು ಕಳೆದುಕೊಳ್ಳಬೇಕಾಯಿತು. ಆನೆಗಳಿಂದ ಎಳೆಸಿ ಬಿಜಾಪುರಕ್ಕೆ ಅದನ್ನು ಒಯ್ಯಲಾಗಿತ್ತು. ವಿಜಯನಗರ ಯುದ್ಧದಲ್ಲಿ, ಅದನ್ನು ನಿರ್ಮಿಸಿದ ರುಮಿ ಖಾನನೇ ಅದನ್ನು ಚಲಾಯಿಸಿ, ವಿಜಯನಗರದ ಸೈನ್ಯ ಚಲ್ಲಾಪಿಲ್ಲಿಯಾಗಲು ಕಾರಣನಾದ. ಎರಡೇ ವರ್ಷಗಳಲ್ಲಿ ಈ ರುಮಿ ಖಾನನು ಐದುನೂರಕ್ಕೂ ಹೆಚ್ಚು ತೋಫುಗಳನ್ನು ನಿರ್ಮಿಸಿದ್ದನಂತೆ!

ಸಲಾಬತ್ ಖಾನ್ ಎಂಬ ಇನ್ನೊಬ್ಬ ದಕ್ಷ ಮಂತ್ರಿ ಅಹಮ್ಮದ್ ನಗರದ ಏಳ್ಗೆಗೆ ಕಾರಣನಾದ. ಈತ ಅಪರೂಪದ ನೀರು ತಂತ್ರಜ್ಞನಾಗಿದ್ದ. ಅಹಮ್ಮದ್ ನಗರದಲ್ಲಿ ಈತನ ಮೇಲ್ವಿಚಾರಣೆಯಲ್ಲಿ ಏಳು ಜಲಾಶಯಗಳು ನಿರ್ಮಿತವಾದವು. ಸ್ವಾಭಾವಿಕ ನೀರಿನ ಝರಿಯ ಸ್ಥಳಗಳಿಂದ 60 ಅಡಿ ಕೆಳಗೆ ಕಲ್ಲಿನ ಕೊಳಾಯಿಗಳನ್ನು ನಿರ್ಮಿಸಿ ಯಥೇಚ್ಛ ನೀರು ಪೂರೈಕೆ ಆಗುವಂತೆ ನೋಡಿಕೊಂಡಿದ್ದ. ಅವುಗಳಲ್ಲಿ ನಾಲ್ಕು ಜಲಾಶಯಗಳು ಇಂದಿಗೂ ಅಹಮ್ಮದ್ ನಗರಕ್ಕೆ ನೀರು ಪೂರೈಸುವಷ್ಟು ಗಟ್ಟಿಯಾಗಿವೆ! ಇಡೀ ರಾಜ್ಯದಲ್ಲಿ



ಮಾಲಿಕ್-ಎ-ಮೈದಾನ್ ತೋಪು, ಬಿಜಾಪುರ

10 ಲಕ್ಷ ಹಣ್ಣಿನ ಮರಗಳನ್ನು ನಡೆಸಿದ. ಹುಸೇನ್ ನಿಜಾಮ್ ಶಹನು ಸ್ವತ
ಸಾಹಿತ್ಯ ಕಲೆಗಳಲ್ಲಿ ಹೆಚ್ಚಿನ ಆಸಕ್ತಿ ತಳೆದಿದ್ದ. ಆತನ ಆಸ್ಥಾನದಲ್ಲಿ ಚರಿತ್ರಕಾರರು,
ಚಿತ್ರಕಾರರು, ವೈದ್ಯರು ಇದ್ದರು. ದೇಶೀ ಚಿಕಿತ್ಸೆಯ ವೈದ್ಯಕೀಯ ಗ್ರಂಥಗಳು
ಪರ್ಶಿಯನ್ ಭಾಷೆಯಲ್ಲಿ ಬರೆಯಲ್ಪಟ್ಟು ಮಧ್ಯ ಪ್ರಾಚ್ಯ ದೇಶಗಳಲ್ಲಿ
ಜನಪ್ರಿಯವಾದವು.

ಹುಸೇನ್ ನಿಜಾಮ್ ಶಹನಿಗೆ ಇನ್ನಿಬ್ಬರು ಪತ್ನಿಯರಿದ್ದರೂ ತುರ್ಕಸ್ತಾನ
ಮೂಲದ ರಾಜಮನೆತನದ ಖುಂಝಾ ಹುಮಾಯೂನ್ ಎಂಬ ಸುಂದರ
ಕೆಚ್ಚೆದೆಯ, ಅಸಾಧಾರಣ ಬುದ್ಧಿಮತ್ತೆಯ ತರುಣಿಯನ್ನು ಮದುವೆಯಾಗಿ
ಪಟ್ಟದ ರಾಣಿಯಾಗಿಸಿದ. ಇವಳ ಮಕ್ಕಳಾದ ಚಾಂದ್ ಬೀಬಿ, ಮುರ್ತುಝಾ,
ಬುರ್ಹಾನ್‌ರು ದಖ್ಖನಿನ ಶಾಹೀ ಕಾಲದಲ್ಲಿಯ ಪ್ರಮುಖ ಘಟನೆಗಳಿಗೆ
ಕಾರಣರಾದರು.

**ರಾಣಿ ಖುಂಝಾ ಹುಮಾಯೂನ್ : (ಕ್ರಿ.ಶ.ಸು. 1520–1572)** ಚಾಂದ್
ಬೀಬಿಯ ತಾಯಿ. ಅಝುರ್‌ಬೈಜಾನ್ (ಮಧ್ಯ ಏಶ್ಯ)ದಲ್ಲಿ ಆಳುತ್ತಿದ್ದ 'ಖ಼ಾರಾ
ಬ್ಬುವಿನ್ಲೂ' ಎಂಬ ತುರ್ಕಿ ರಾಜಮನೆತನದಲ್ಲಿ ಹುಟ್ಟಿದವಳು. ಕಲ್ಲು ಬೆಟ್ಟಗಳ
ಪರ್ವತಮಯ ಪ್ರದೇಶದಲ್ಲಿ ಬರಡು ಭೂಮಿಯ ಕಠಿಣ ನಿಸರ್ಗ ಮತ್ತು
ಕಾಡು ಜನಾಂಗಗಳ ಅನಿರೀಕ್ಷಿತ ದಾಳಿಗಳನ್ನು ಎದುರಿಸುತ್ತಲೇ ಬೆಳೆದ
ಜನಾಂಗದವಳು. ಈ ವನಿತೆಯರೆಲ್ಲ ಕಷ್ಟ ಸಹಿಷ್ಣುಗಳಿದ್ದಂತೆ ಧೈರ್ಯ–
ಸ್ಥೈರ್ಯಗಳಿಗೆ ಹೆಸರಾದವರು. ಖುಂಝಾಳ ಅಜ್ಜ, ಟಾರ್ಟರರ ದಾಳಿಯ
ಬಳಿಕ ಪಟ್ಟಕ್ಕಾಗಿ ನಡೆದ ಸಂಘರ್ಷ ಮತ್ತು ಕಗ್ಗೊಲೆಗಳನ್ನು ತಪ್ಪಿಸಿಕೊಳ್ಳಲು
ಅಝುರ್‌ಬೈಜಾನ್‌ದಿಂದ ಓಡಿಬಂದ.

ಮಧ್ಯ ಪ್ರಾಚ್ಯದಿಂದ ಬರುತ್ತಿದ್ದ ಶಿಯಾ ಪಂಗಡಕ್ಕೆ ಸೇರಿದವರಿಗೆಲ್ಲ
ದಖ್ಖನದ ಶಾಹೀ ರಾಜ್ಯಗಳಲ್ಲಿ ರಾಜ ಮರ್ಯಾದೆ ಗೌರವಗಳು ಸಿಗುತ್ತಿದ್ದವು.
ಇನ್ನು ರೂಪ, ಬಣ್ಣ, ಮೈಕಟ್ಟುಗಳಲ್ಲಿ ಎದ್ದು ಕಾಣುತ್ತಿದ್ದ, ಸುಶಿಕ್ಷಿತಳಾಗಿದ್ದ,
ಕುದುರೆ ಸವಾರಿ, ಶಸ್ತ್ರಾಸ್ತ್ರಗಳ ಪ್ರಯೋಗಬಲ್ಲವಳಾಗಿದ್ದ ಖುಂಝಾಳನ್ನು
ಹುಸೇನ್ ನಿಜಾಮ್ ಶಹನು ವರಿಸಿದ್ದು ಸ್ವಾಭಾವಿಕವೇ ಆಗಿತ್ತು.

ರಾಣಿ ಖುಂಝಾ, ಮಕ್ಕಳಿಗೆಲ್ಲ ಉತ್ತಮ ಶಿಕ್ಷಣ ಕೊಡಿಸಿದ್ದಳು. ತನ್ನ
ತವರು ನೆಲಕ್ಕೆ ಸ್ವಾಭಾವಿಕವಾಗಿದ್ದ ಅಶ್ವಸವಾರಿ, ಶಿಕಾರಿ, ಶಸ್ತ್ರಾಸ್ತ್ರಗಳ ಬಳಕೆ,
ಮುಖ್ಯವಾಗಿ ತುಬಾಕಿಯ ಪ್ರಯೋಗಗಳಲ್ಲಿ ಪರಿಣಿತರನ್ನಾಗಿಸಿದಳು. ಅರಬ್ಬಿ
ಧಾರ್ಮಿಕ ಗ್ರಂಥಗಳು, ಪರ್ಶಿಯನ್ ಕಾವ್ಯಗಳು ಕಡ್ಡಾಯದ

ವಿಷಯಗಳಾಗಿದ್ದವು. ಅವಳ ಮಗಳಾದ ಚಾಂದ್ ಬೀಬಿಯು ಅತ್ಯಂತ ಕುಶಾಗ್ರಮತಿಯಾಗಿದ್ದಳು. ತಾಯಿಯ ತವರು ಮನೆಯ ಭಾಷೆ ತುರ್ಕಿ, ಅರಬ್ಬಿ, ಫಾರಸಿ (ಪರ್ಶಿಯನ್)ಗಳಲ್ಲದೇ ಪ್ರಾದೇಶಿಕ ಭಾಷೆಗಳಾದ ಮರಾಠೀ, ಕನ್ನಡ ಮತ್ತು ಸೈನ್ಯದ ಸಂಪರ್ಕಭಾಷೆಯಾಗಿದ್ದ ದಖನಿ (ಹಿಂದಿ)ಗಳಲ್ಲಿ ಪರಿಣತಳಿದ್ದಳು. ಕಸೂತಿ–ಹೆಣಿಗೆ–ಹೊಲಿಗೆಗಳಲ್ಲಿ ಜಾಣೆ. ನಿಸರ್ಗಚಿತ್ರಗಳು ಮತ್ತು ಹೂಗಳನ್ನು ಬಣ್ಣ ಬಣ್ಣದಲ್ಲಿ ಬಿಡಿಸುವದು ಅವಳ ಹವ್ಯಾಸವಾಗಿತ್ತು. ಹಾಡುತ್ತಿದ್ದಳು, ವೀಣೆ (ಸಿತಾರ್‌ದ ಮೊದಲ ರೂಪ) ನುಡಿಸುತ್ತಿದ್ದಳು. ಜೊತೆಗೆ ಅತ್ಯಂತ ಸುಂದರಿಯೆಂದು ಅವಳ ಖ್ಯಾತಿ ಇತ್ತು. ಹದಿನಾರನೆಯ ವಯಸ್ಸಿನಲ್ಲಿ ಅವಳ ಮದುವೆ ಬಿಜಾಪುರದ ಯುವ ಅರಸ ಅಲಿ ಆದಿಲ್ ಶಹನೊಂದಿಗೆ ಏರ್ಪಟ್ಟಾಗ ಅತಿ ಅನುರೂಪದ ಜೋಡಿಯೆಂದು ಎಲ್ಲರೂ ಹೊಗಳುವಂತೆ ಆಗಿತ್ತು.

ಚಾಂದ್ ಬೀಬಿಯ ಮದುವೆಯಾದ ಕೆಲದಿನಗಳಲ್ಲೇ ಆಕೆಯ ತಂದೆಯು ನೇತೃತ್ವ ವಹಿಸಿದ ರಕ್ಕಸಗಿ ತಂಗಡಿ ಯುದ್ಧ ನಡೆಯಿತು (1565). ಕೆಲವೇ ತಿಂಗಳಲ್ಲಿ ಹುಸೇನ್ ನಿಜಾಮ್ ಶಹನೂ ನಿಧನ ಹೊಂದಿದ. ಪಟ್ಟಕ್ಕೆ ಬಾಧ್ಯಸ್ಥನಾಗಿದ್ದ ಮುರ್ತುಝಾ ಅಪ್ರಾಪ್ತ ವಯಸ್ಕನಾಗಿದ್ದ. ಹೀಗಾಗಿ ಅಹಮ್ಮದ್ ನಗರದ ಆಡಳಿತ ಸೂತ್ರಗಳನ್ನೆಲ್ಲ ತಾಯಿ ಖುಂಝಾ ಹುಮಾಯೂನ್, ಸ್ವತಃ ವಹಿಸಿಕೊಂಡಳು. ರಾಜದೂತರು ಮೊದಲಾದವರೊಡನೆ ಸಭೆ ನಡೆಸುತ್ತಿದ್ದಳು. ಇಸ್ಲಾಂ ಕಟ್ಟಳೆ ಪ್ರಕಾರ ಮುಖ ತೋರಿಸುವಂತೆ ಇರಲಿಲ್ಲ. ಇತರರ ಮತ್ತು ರಾಣಿಯ ನಡುವೆ ತೆರೆ ಇರುತ್ತಿತ್ತು. ಏಳೆಂಟು ವರ್ಷ ಆಕೆ ಈ ರೀತಿ ಸುಸೂತ್ರವಾಗಿ ರಾಜ್ಯಕಾರಭಾರ ನಡೆಸಿದಳು. ಪ್ರಾಪ್ತ ವಯಸ್ಕನಾಗುತ್ತಿದ್ದಂತೆ ಮುರ್ತುಝಾ ತಾನೇ ಸರ್ವಾಧಿಕಾರಿಯೆಂದು ಸಾರಿದ. ಸಮರ್ಥ ರಾಣಿಯೆಂದು ಹೆಸರು ಪಡೆದ ತಾಯಿಯನ್ನು ಸಾಯುವವರೆಗೆ ಸೆರೆಮನೆಯಲ್ಲಿಟ್ಟ. ಅಹಮ್ಮದ್ ನಗರ ರಾಜ್ಯವು ಪಟ್ಟಕ್ಕಾಗಿ ನಡೆದ ಕಚ್ಚಾಟ, ಮತ್ತಿತರ ಷಡ್ಯಂತ್ರಗಳಿಗೆ ಉದ್ದಕ್ಕೂ ಸಾಕ್ಷಿಯಾಯಿತು.

# 6

# ಕರ್ನಾಟಕದ ಸೊಸೆಯಾಗಿ

ಒಂದೇ ಮೂಲ, ಒಂದೇ ಭಾಷೆ, ಒಂದೇ ಧರ್ಮದ ಹಿನ್ನೆಲೆಯ ಶಾಹೀ ಅರಸರು ಪರಸ್ಪರ ರಾಜಕೀಯ ಕಚ್ಚಾಟದಲ್ಲಿ ಕಾಲಕಳೆದರೂ ಅವರವರ ರಾಜ್ಯಗಳಲ್ಲಿ ಪ್ರಜಾಪೀಡನೆ, ಬಲಾತ್ಕಾರದ ಧರ್ಮಾಂತರಗಳು ವಿರಳವೆಂದೇ ಹೇಳಬೇಕು. ದಖ್ಖನಿ ಶಾಹಿಗಳು ಪರಧರ್ಮ ಸಹಿಷ್ಣುಗಳಾಗಿದ್ದರು. ಆದಿಲ್‌ಶಾಹಿಗಳು, ನಿಜಾಮ ಶಾಹಿಗಳು, ಕುತುಬ್‌ಶಾಹಿಗಳು, ಮಸೀದಿ, ಖಾನಖಾ (ಸೂಫಿ ವಿದ್ಯಾಮಂದಿರಗಳು), ಮಠ, ದೇವಾಲಯಗಳಿಗೆ ದತ್ತಿಗಳನ್ನು ಕೂಡ ಮಾಡಿದ್ದಾರೆ. ಗಾಣಗಾಪುರದ ದತ್ತ ಮಂದಿರ, ಅಥಣಿಯ ಸಿದ್ಧರ ಮಠ ಇಂಥ ಉದಾಹರಣೆಗಳು. ಅವರ ಪ್ರದೇಶಗಳ ಬಹು ಸಂಖ್ಯಾತರು ಹಿಂದೂಗಳೇ ಆಗಿದ್ದರು. ಆಸ್ಥಾನ ವಿದ್ವಾಂಸರಲ್ಲಿ ಹಿಂದೂಗಳು ಸಾಕಷ್ಟು ಸಂಖ್ಯೆಯಲ್ಲಿ ಇರುತ್ತಿದ್ದಂತೆ ಸ್ಥಳೀಯ ಆಡಳಿತಾಧಿಕಾರಿಗಳೆಲ್ಲ ಹೆಚ್ಚಾಗಿ ಹಿಂದೂಗಳೇ ಆಗಿರುತ್ತಿದ್ದರು. ಹೀಗಾಗಿ ಫರ್ಮಾನು ಆದೇಶಗಳೆಲ್ಲ ಸ್ಥಳೀಯ ಭಾಷೆಗಳಾದ ಕನ್ನಡ ಮರಾಠಿಗಳಲ್ಲಿ ಹೊರಡುತ್ತಿದ್ದವು. ಸಂಪರ್ಕ ಭಾಷೆಯಾಗಿ ದಖ್ಖನಿ

(ಉರ್ದು) ಹಿಂದಿ ರೂಪಗೊಂಡರೆ ಇತರ ನಾಡುಗಳೊಡನೆ ವ್ಯವಹಾರಗಳೆಲ್ಲ ಪರ್ಶಿಯನ್ ಭಾಷೆಯಲ್ಲಿ ಜರುಗುತ್ತಿದ್ದವು. ಭಾಷಾಭಿಮಾನ ಅಂದಿನವರನ್ನು ಕುರುಡಾಗಿಸಿರಲಿಲ್ಲ. ರಾಜಕೀಯ ವೈರತ್ವದಲ್ಲಿ ಇವು ಒಳಗೊಂಡಿರಲಿಲ್ಲ!

ಇಂಥ ಹಿನ್ನೆಲೆ ಅಹಮ್ಮದ್ ನಗರದಲ್ಲಿ ಇತ್ತು. ವಿಜಾಪುರದಲ್ಲಿ ಪರಸ್ಪರ ಸೌಹಾರ್ದ ಇನ್ನೂ ಜೋರಾಗಿತ್ತು. ಚಾಂದ್ ಬೀಬಿ ಬಲುಬೇಗ ಬಿಜಾಪುರದ ಸುಸಂಸ್ಕೃತ ವಾತಾವರಣದಲ್ಲಿ ಒಂದಾಗಿಹೋದಳು. ಕವಿ, ತತ್ವಜ್ಞಾನಿ, ಕಲಾಪೋಷಕ ಪತಿ ಸಿಕ್ಕರೆ ಕೇಳಬೇಕೆ? ಇಬ್ಬರೂ ಪರ್ಶಿಯಾ ಮತ್ತಿತರ ಮಧ್ಯ ಪ್ರಾಚ್ಯ ದೇಶಗಳಿಂದ ಎಡಬಿಡದೆ ಬರುತ್ತಿದ್ದ ಶಿಲ್ಪಿ, ವಾಸ್ತುಶಿಲ್ಪಿ, ತಂತ್ರಜ್ಞರು, ಕವಿಗಳು, ಕಲಾವಿದರು, ಸೂಫಿ ಸಂತರನ್ನೆಲ್ಲ ಮುಕ್ತ ಮನಸ್ಸಿನಿಂದ ಬರಮಾಡಿಕೊಂಡರು. ಬಿಜಾಪುರವು ಮಿಶ್ರ ಸಂಸ್ಕೃತಿಯ ಅಪೂರ್ವ ಪ್ರದೇಶವಾಗಿ ಬೆಳೆಯಿತು.

ಅಲಿ-ಚಾಂದ್ ಬೀಬಿ ಇಬ್ಬರಿಗೂ ಒಳ್ಳೆಯ ವಾಚನಾಭಿರುಚಿ ಇತ್ತು. ರಾಜವಾಚನಾಲಯಗಳಲ್ಲಿ ಹೊರದೇಶಗಳಿಂದ ಉತ್ತಮೋತ್ತಮ ಗ್ರಂಥಗಳ ಪ್ರತಿಗಳು ಬರುವಂತೆ ಮಾಡಿದರು. ಕಾಗದ (ಕೈಯಿಂದ ತಯಾರಿಸಿದ್ದು) ಪ್ರಚಾರಕ್ಕೆ ಬಂದಿದ್ದರೂ ಮುದ್ರಣ ಯಂತ್ರ ಬಂದಿರಲಿಲ್ಲ. ಹೀಗಾಗಿ ಕೈಬರಹದ ಅಂದಚೆಂದಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿತ್ತು. ಅರಸು ಅಲಿ ಲಿಪಿಗಳ ಕುರಿತಾದ ಪ್ರಾವೀಣ್ಯ ಪಡೆದಿದ್ದ. ಪತಿ-ಪತ್ನಿಯರಿಬ್ಬರೂ ಕಾವ್ಯ ಪ್ರೀತಿಯೊಂದಿಗೆ ಕಲಾತ್ಮಕ ಬರವಣಿಗೆಯನ್ನೂ ರೂಢಿಸಿಕೊಂಡಿದ್ದರು.

ಬೇಟೆ, ವನವಿಹಾರ, ಗಡಿಪ್ರದೇಶಗಳಿಗೆ ಭೇಟಿ ಮುಂತಾದವಕ್ಕೆ ರಾಜದಂಪತಿ ಜೊತೆಯಾಗಿಯೇ ಹೊರಡುತ್ತಿದ್ದರು. ಬಂಡಾಯಗಳು ಎದುರಾದಾಗಲೂ ಆ ಪ್ರದೇಶಕ್ಕೆ ಹೋಗಲು ಹಿಂಜರಿಯುತ್ತಿರಲಿಲ್ಲ. ಪ್ರಸಿದ್ಧವಾದ ರಕ್ಕಸ-ತಂಗಡಿ ಯುದ್ಧದ ವೀಕ್ಷಕಿಯೂ ಆಗಿ ಚಾಂದ್ ಬೀಬಿ ಅನುಭವ ಪಡೆದಿದ್ದಳೆಂದು ಹೇಳಲಾಗುತ್ತದೆ. ಆಧುನಿಕ ಯುದ್ಧತಂತ್ರಗಳು, ಶಸ್ತ್ರಾಸ್ತ್ರಗಳ ಮಾದರಿಗಳಲ್ಲಿ ವಿಶೇಷ ಆಸಕ್ತಿಯನ್ನು ತಳೆದಂತೆ, ವಾಸ್ತು ಪ್ರಕಾರಗಳು, ಕಲಾತ್ಮಕ ಭವನಗಳು, ಉದ್ಯಾನಗಳು, ಕೋಟೆ-ಕೊತ್ತಳಗಳ ಭದ್ರತೆಯ ಜೊತೆಗೆ ಹೊಸ ಬಗೆಯ ವಿನ್ಯಾಸಗಳನ್ನು ತಿಳಿದುಕೊಂಡು ಪರಿಣತರೊಂದಿಗೆ ಚರ್ಚಿಸಿ ಅವುಗಳ ನಿರ್ಮಾಣಕ್ಕೆ ರಾಜದಂಪತಿ ಕಾರಣರಾದರು. ಭಾವ ಚಿತ್ರಗಳು (portraits), ಚಿಕಣಿ ಚಿತ್ರಗಳು ಸ್ವತಂತ್ರರೂಪ ತಾಳಿದ್ದು ಈ ಕಾಲದಲ್ಲೇ! ಹಲವು ಚಿತ್ರಗ್ರಂಥಗಳಿಗೆ ಈ ದಂಪತಿ ಪ್ರೋತ್ಸಾಹ

ನೀಡಿದ್ದಾರೆ. ಕೆಲವೇ ಮಾದರಿಗಳು ಉಳಿದುಕೊಂಡಿವೆ.

ಅಲಿ-ಚಾಂದ್ ಬೀಬಿ ದಂಪತಿಗಳಿಗೆ ಮಕ್ಕಳಿರಲಿಲ್ಲ. ಅಲಿಯ ಸೋದರ ತಹಮಾಪ್ಸ್‌ನ ಮಗ ಇಬ್ರಾಹಿಮ್ ಮತ್ತು ಮಗಳು ಖದೀಜಾಳನ್ನು ಹೊಟ್ಟೆ ಮಕ್ಕಳ ಪ್ರೀತಿಯಿಂದ ಬೆಳೆಸಿದರು. ಮುಂದೆ ಇಬ್ರಾಹಿಮನು ಆದಿಲ್ ಶಾಹಿ ಅರಸರಲ್ಲೇ ಅಪ್ರತಿಮನೆಂಬ ಖ್ಯಾತಿ ಹೊತ್ತ. ಆತನ ಕಾಲದ ಕಲಾಕೃತಿಗಳು ದೇಶ-ವಿದೇಶಗಳಲ್ಲಿ, ಪ್ರಸಿದ್ಧ ಮ್ಯೂಝಿಯಂಗಳಲ್ಲಿ, ಖಾಸಗಿ ಕಲಾಸಕ್ತ ಕುಟುಂಬಗಳಲ್ಲಿ ಉಳಿದುಬಂದಿವೆ. ಸಂಗೀತದಲ್ಲಿ ಹೆಚ್ಚಿನ ಪ್ರಾವೀಣ್ಯ ಪಡೆಯುವದರ ಜೊತೆಗೆ ಸಾಕು ತಾಯ್ತಂದೆಗಳ ಬಹುಮುಖ ಆಸಕ್ತಿಗಳನ್ನು ಬಾಲಕ ಇಬ್ರಾಹಿಮ್ ಚಿಕ್ಕಂದಿನಲ್ಲೇ ರೂಢಿಸಿಕೊಂಡ.

**ಅಲಿ ಆದಿಲ್‌ಶಹನ ಅಂತ್ಯ** : ತತ್ವಜ್ಞಾನ, ಕಲೆಗಳಲ್ಲಿ ಆಸಕ್ತಿ ತಳೆದಿದ್ದರೂ ಅಲಿಯು ಒಳ್ಳೆಯ ಯೋಧನೂ, ರಾಜಕಾರಣ ಧುರೀಣನೂ ಆಗಿದ್ದ. ವಿಜಯನಗರದ ರಾಜ್ಯದೊಡನೆ ಉತ್ತಮ ಸಂಬಂಧ ಹೊಂದಿದ್ದ ಆತನನ್ನು ತಮ್ಮ ಶಾಹೀ ಕೂಟಕ್ಕೆ ಎಳೆದುಕೊಳ್ಳಲು ಇತರರು ಹೆಚ್ಚಿನ ಶ್ರಮ ಪಡಬೇಕಾಯಿತು. ಪೋರ್ಚುಗೀಸರು ಆದಿಲ್‌ಶಾಹಿಗಳಿಂದ ಗೋವೆಯನ್ನು ಶಾಶ್ವತವಾಗಿ ಕಸಿದುಕೊಂಡಿದ್ದರೂ, ಆ ಪ್ರದೇಶದಲ್ಲಿದ್ದ ತಮ್ಮ ಹಡಗು ನಿರ್ಮಾಣದ ಕೇಂದ್ರಕ್ಕೆ ಹಾನಿಯಾಗದಂತೆ ಅವರ ಸ್ನೇಹಪತ್ರ ಪಡೆದ. ಬಿಜಾಪುರದ ಸಮೀಪ ಅವರಿಗೆ ಚರ್ಚ್ ನಿರ್ಮಿಸಲು ಅವಕಾಶ ಮಾಡಿಕೊಟ್ಟ. ಶಿಯಾ-ಸುನ್ನಿಭೇದ ಮಾಡದೇ ಸೂಫಿಗಳನ್ನು ಹಿಂದೂ ತತ್ವವೇತ್ತರನ್ನು ಗೌರವಿಸುತ್ತಿದ್ದ. ಪೂರ್ಣಾವಧಿ ಅರಸನಾಗಿ ಆಳುವ ಅವಕಾಶ ಸಿಕ್ಕಿದ್ದರೆ ಅವನೂ ಆ ವಂಶದ ಶ್ರೇಷ್ಠ ಅರಸರಲ್ಲಿ ಒಬ್ಬನಾಗುತ್ತಿದ್ದನೋ ಏನೋ ಅನಿರೀಕ್ಷಿತ ರೀತಿಯಲ್ಲಿ ಅವನ ಕೊಲೆಯಾಯಿತು.

ಅಲಿ ಆದಿಲ್ ಶಹನ ಸೋದರಿಯನ್ನು ಬೀದರದ ಬರೀದ್ ಶಹನಿಗೆ ಮದುವೆ ಮಾಡಿಕೊಡಲಾಗಿತ್ತು. ಆಕೆ ಹೆರಿಗೆಯಲ್ಲಿ ತೀರಿಕೊಂಡಳು. ಇಸ್ಲಾಂ ಕಾನೂನಿನ ಪ್ರಕಾರ, ನಿಪುತ್ರಿಕಳ ಸಾವಿನ ಬಳಿಕ ಆಕೆಯ ಆಸ್ತಿ, ಬಟ್ಟೆ ಬರೆ ಒಡವೆ ವಸ್ತುಗಳು ತವರುಮನೆಗೆ ತಿರುಗಿ ಬರಬೇಕಾಗಿತ್ತು. ಅವು ಸಕಾಲದಲ್ಲಿ ಬರಲಿಲ್ಲ. ಎರಡು ಮೂರು ಬಾರಿ ಎಚ್ಚರಿಸಿದ ಬಳಿಕ, ಇತರ ಸಾಮಾನುಗಳು ಬಂದರೂ ಒಡವೆಗಳು ಬಂದಿರಲಿಲ್ಲ. ಕೊನೆಗೊಮ್ಮೆ ಇಬ್ಬರು ಖೋಜಾಗಳ ನೇತೃತ್ವದಲ್ಲಿ ರಾಜಕುಮಾರಿಯ ಬಹು ಬೆಲೆಯುಳ್ಳದ್ದಾಗಿದ್ದ ಒಡವೆಗಳು ವಾಪಸ್ಸಾದವು.

ರಾಜಭಂಡಾರಕ್ಕೆ ಸೇರಿಸುವ ಮುನ್ನ ಅವನ್ನೆಲ್ಲ ವರ್ಗೀಕರಿಸಬೇಕಾದ ಸಂದರ್ಭದಲ್ಲಿ ಅರಸು ಅಲಿಯು ಒಂದುರಾತ್ರಿ ಆ ಇಬ್ಬರು ಖೋಜಾರಲ್ಲಿ ಬುದ್ಧಿವಂತನೆಂದು ಕಂಡವನನ್ನು ತನ್ನ ಖಾಸಾ ಕೋಣೆಗೆ ಕರಸಿದನಂತೆ. ಸೋದರಿಯ ರಾಣಿವಾಸದಲ್ಲಿದ್ದ ಖೋಜಾ, ಆಭರಣಗಳನ್ನು ಸರಿಯಾಗಿ ಗುರುತಿಸಬಲ್ಲ ಎಂಬುದು ಅಲಿಯ ನಿರೀಕ್ಷೆಯಾಗಿತ್ತು. ಆ ಖೋಜಾನು ಅನಿರೀಕ್ಷಿತವಾಗಿ ಅರಸನ ಮೇಲೆ ಎರಗಿ ಅವನನ್ನು ತಿವಿದು ಕೊಂದನಂತೆ. ಅಲ್ಪಕಾಲದಲ್ಲಿ ವಿಜಾಪುರದ ರಾಜ್ಯವನ್ನು ವಿಸ್ತರಿಸಿ, ಅದರ ಸಾಂಸ್ಕೃತಿಕ ವೈಭವಕ್ಕೆ ಬಲು ಮಟ್ಟಿಗೆ ಕಾರಣನಾದ ಅಲಿ ಆದಿಲ್ ಶಹನ ಅಂತ್ಯ ಹೀಗೆ ತೀರ ಆಕಸ್ಮಿಕವಾಯಿತು.

ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡಿದ್ದ ಚಾಂದ್ ಬೀಬಿಗೆ ಇದು ಬಲುದೊಡ್ಡ ಆಘಾತವಾಗಿ ಪರಿಣಮಿಸಿತು. ತವರು ಮನೆಯಲ್ಲಿ ಕಂಡ ಉಚಿತ ವೈದ್ಯಕೀಯ ವ್ಯವಸ್ಥೆ, ನೀರಾವರಿ, ಮತ್ತಿತರ ಪ್ರಜಾಭಿವೃದ್ಧಿಯ ಕಾರ್ಯಕ್ರಮಗಳನ್ನು ಅಲಿಯೊಂದಿಗೆ ವಿಜಾಪುರದಲ್ಲಿ ಕೈಕೊಳ್ಳಬೇಕೆಂದಿದ್ದ ಅವಳ ಆಸೆ ಮಣ್ಣುಗೂಡಿತು. ಅತಿ ಮುಖ್ಯವಾಗಿದ್ದ ರಾಜ್ಯದ ಸಂರಕ್ಷಣೆ ಮತ್ತು ಮುಂದೆ ರಾಜನಾಗಬೇಕಿದ್ದ ಕೇವಲ ಒಂಭತ್ತು ವರ್ಷದ ಇಬ್ರಾಹಿಮನ ಯೋಗಕ್ಷೇಮ, ಶಿಕ್ಷಣಗಳತ್ತ ಗಮನ ಹರಿಸಬೇಕಾಗಿತ್ತು. ತನ್ನ ಬಾಳಿನ ಶೂನ್ಯತೆ ಮರೆತು ರಾಜ್ಯಾಡಳಿತದಲ್ಲಿ ಬಾಧೆ ಬರದಂತೆ ನೋಡಿಕೊಂಡಳು.

**ರೀಜಂಟ್ ಆಗಿ ಚಾಂದ್ ಬೀಬಿ :** ಇಬ್ರಾಹಿಮನ ಪಟ್ಟಾಭಿಷೇಕ ನೆರವೇರಿತು. ಎರಡನೆಯ ಇಬ್ರಾಹಿಮ್ ಆದಿಲ್ ಶಹನೆಂದು ಆತ 1580ರಲ್ಲಿ ಪಟ್ಟವೇರಿದ. ನಿಷ್ಠ ಮತ್ತು ದಕ್ಷ ಸರದಾರರನ್ನು ಗುರುತಿಸಿ ಚಾಂದ್ ಬೀಬಿಯು ಅವರ ಸಹಾಯದಿಂದ ರೀಜಂಟ್ (ರಾಜ ಪ್ರತಿನಿಧಿ) ಆಗಿ ರಾಜ್ಯ ಕಾರಭಾರ ನಡೆಸಿದಳು. ದಖ್ಖನಿನ ಶಾಹಿಗಳ, ಅವರ ಬಂಟರ ಅಪ್ರಾಮಾಣಿಕತೆ, ಸ್ವಾರ್ಥ, ಷಡ್ಯಂತ್ರಗಳ ಪರಿಚಯ ಅವಳಿಗೆ ಇತ್ತು. ಇವರಲ್ಲದೆ, ಬಲುವೇಗದಲ್ಲಿ ಪ್ರಬಲ ಸಾಮ್ರಾಜ್ಯವಾಗಿ ಉತ್ತರದಲ್ಲಿ ಬೆಳೆಯುತ್ತಿದ್ದ ಮೊಗಲರು, ನಿಜವಾದ ಶತ್ರುಗಳು ಎಂದು ಬಲ್ಲವಳಾಗಿದ್ದಳು. ನೆರೆಹೊರೆಯ ಹಿಂದೂ ತುಂಡರಸರು, ಪಾಳೇಗಾರರೊಂದಿಗೆ ಸ್ನೇಹ-ಸಂಬಂಧ ಸ್ಥಾಪಿಸಿದಳು. ಅದಾಗಲೇ ಗೆರಿಲ್ಲಾ ಕಾಳಗಗಳಲ್ಲಿ ನೈಪುಣ್ಯ ಪಡೆದಿದ್ದ ಮರಾಠರ ನೆರವನ್ನು ಪಡೆಯುವಲ್ಲಿ ಹಿಂಜರಿಯಲಿಲ್ಲ. ಬಿಜಾಪುರದ ಮೇಲಾಡಳಿತದಲ್ಲಿದ್ದರೂ ಪ್ರತ್ಯೇಕತೆ ಉಳಿಸಿಕೊಳ್ಳಲು ಹವಣಿಸುತ್ತಿದ್ದ ಬುಡಕಟ್ಟಿನ ವೀರ ಜನಾಂಗಗಳಾದ

ಸುರಪುರ, ತಾಳೀಕೋಟೆ, ಮುದ್ಗಲ್‌ಗಳ ನಾಯಕರೊಡನೆ ನಿಕಟ ಸಂಬಂಧ ಸ್ಥಾಪಿಸಿದಳು.

ಕೋಟೆ-ಕೊತ್ತಳಗಳ ಮೇಲ್ವಿಚಾರಣೆಯನ್ನು ಸ್ವತಃ ಕೈಕೊಳ್ಳುತ್ತಿದ್ದಳು. ಇಬ್ರಾಹಿಮನನ್ನು ಕರೆದೊಯ್ದು ಆಯಕಟ್ಟಿನ ಸ್ಥಳಗಳನ್ನು ಪರಿಚಯಿಸುತ್ತಿದ್ದಳು. ರಾತ್ರಿಯೂ ಅನಿರೀಕ್ಷಿತ ಭೇಟಿಕೊಟ್ಟು ಪಹರೆಯವರ ಹಾಗೂ ಇತರ ಕಾವಲು ಪಡೆಯವರ ತೊಂದರೆಗಳನ್ನು ವಿಚಾರಿಸಿಕೊಳ್ಳುತ್ತಿದ್ದಳು. ಬಿಡುವು ಸಿಕ್ಕಾಗಲೆಲ್ಲ ಜನ ಸಾಮಾನ್ಯರ ಸಂಪರ್ಕ ಸಾಧಿಸುತ್ತಿದ್ದಳು.

ಕೋಟೆಯ ರಕ್ಷಣೆಯ ಮುಖ್ಯ ಜವಾಬ್ದಾರಿ ಹೊತ್ತಿದ್ದ ಕಮಾಲುದ್ದೀನ್ 'ದಖ್ಖನಿ' ಎಂಬ ಬಿರುದು ಹೊತ್ತಿದ್ದ ಕಾಮಿಲ್ ಖಾನನು ಒಳ್ಳೆ ಸೇನಾನಿಯೂ ಅನುಭವಿ ಆಡಳಿತಗಾರನೂ ಆಗಿದ್ದರಿಂದ ಅವನನ್ನು ಪ್ರಧಾನಿಯಾಗಿ ಚಾಂದ್ ಬೀಬಿ ನೇಮಿಸಿದಳು. ಮೊದಮೊದಲು ನಿಷ್ಠೆಯಿಂದ ನಡೆದುಕೊಂಡ ಕಾಮಿಲ್ ಖಾನನು, ಕ್ರಮೇಣ ಸರ್ವಾಧಿಕಾರಿಯಂತೆ ವರ್ತಿಸಲಾರಂಭಿಸಿದ. ಸ್ವಂತ ಕುಟುಂಬದ ಸದಸ್ಯರು, ಸ್ನೇಹಿತರು, ಹಿಂಬಾಲಕರನ್ನೆಲ್ಲ ಪ್ರಮುಖ ಹುದ್ದೆಗಳಿಗೆ ನೇಮಿಸಲಾರಂಭಿಸಿದ. ನಿಧಾನವಾಗಿ ರಾಜ ಬೊಕ್ಕಸದ ಮೇಲೂ ಕಣ್ಣುಹಾಕಿದ. ತನ್ನ ಹಸ್ತಕ್ಷೇಪ ಬಿಗಿಗೊಳಿಸುವ ಯೋಚನೆಯಿಂದ ತನ್ನ ಅಪ್ಪಣೆ ಇಲ್ಲದೆ ಅರಮನೆಯೊಳಗೆ ಯಾವ ನೌಕರನಿಗೂ ಸಂಬಳ ನೀಡಬಾರದು ಎಂದು ಬಾಲಕರಾಜ ಇಬ್ರಾಹಿಮನ ರುಜುವಿನಲ್ಲಿ ರಾಜಾಜ್ಞೆ ಹೊರಡಿಸಿದ.

ಈ ಬೆಳವಣಿಗೆಯನ್ನು ಗಮನಿಸುತ್ತಲೇ ಚಾಂದ್ ಬೀಬಿ ಕಾರ್ಯೋನ್ಮುಖಿಯಾದಳು. ಮುತ್ಸದ್ದಿ, ಅನುಭವಿ ಮತ್ತು ಹಿರಿಯನಾಗಿದ್ದ ಕೀಶ್ವರ್ ಖಾನ್ ಎಂಬಾತನೊಡನೆ ಚರ್ಚಿಸಿ ಕಾಮಿಲ್ ಖಾನನನ್ನು ನಿಯಂತ್ರಿಸುವ ಯತ್ನವನ್ನು ಕೈಕೊಂಡಳು. ಆಪ್ತಾಲೋಚನೆಯ ಬಳಿಕ ಕೀಶ್ವರ್ ಖಾನನು ನಿಧಾನವಾಗಿ ಕಾರ್ಯಾಚರಣೆಯನ್ನು ಕೈಕೊಳ್ಳಬಹುದೆಂಬ ನಿರೀಕ್ಷೆಯಲ್ಲಿದ್ದಳು. ಆದರೆ ಕೀಶ್ವರ್ ಖಾನನು ತಡಮಾಡದೆ ಕಾಮಿಲ್ ಖಾನನನ್ನು ಲಂಚದ ಪ್ರಕರಣದಲ್ಲಿ ಆರೋಪಿಯಾಗಿಸಿ ಕೊಲ್ಲಿಸಿಬಿಟ್ಟ!

ಇದರಿಂದ ಚಾಂದ್ ಬೀಬಿಗೆ ತೀವ್ರ ಆಘಾತವಾಯಿತು. ಸರದಾರರ ಸಭೆ ಕರೆದಳು. ಅವರೆಲ್ಲರ ಅಭಿಪ್ರಾಯದಂತೆ ಒಳ್ಳೆಯ ಆಡಳಿತಗಾರನಾಗಿ, ಜನರ ಮೆಚ್ಚಿಗೆಗೆ ಪಾತ್ರನಾಗಿದ್ದ ಅಫಜಲ್ ಖಾನ್ ಶಿರಾಝಿ ಎಂಬಾತನನ್ನು ಕಾಮಿಲ್ ಖಾನನ ಸ್ಥಳದಲ್ಲಿ ಪ್ರಧಾನಿಯಾಗಿ ನೇಮಿಸಿದಳು. ತನ್ನ ಅವಕಾಶ ತಪ್ಪಿಹೋಯಿತು ಎಂದು ಕೀಶ್ವರ್ ಖಾನನು ಹಲ್ಲು ಕಡಿಯುತ್ತಲೇ ಇದ್ದನು.



**ಬಿಜಾಪುರದ ಕೋಟೆ**

ಅಷ್ಟರಲ್ಲಿ ದೊಡ್ಡ ಆಪತ್ತು ಎದುರಾಯಿತು. ಬಾಲಕ ಬಾದಶಹ ಮತ್ತು ಮಹಿಳೆ ಅದರಲ್ಲೂ ವಿಧವೆ ರೀಜಂಟ್ ಆಗಿ ಹೊಂದಿದ್ದ ಬಿಜಾಪುರವು ದುರ್ಬಲವಾಗಿದೆ ಎಂದು ಪರಿಗಣಿಸಿ ಗೋಲ್ಕೊಂಡ ಮತ್ತು ಅಹಮ್ಮದ್ ನಗರ ರಾಜ್ಯಗಳು ಒಂದಾಗಿ ಅದನ್ನು ಕಬಳಿಸಲು ಸನ್ನದ್ಧವಾದವು. ಏಕಕಾಲಕ್ಕೆ ದಾಳಿಯಿಟ್ಟವು. ಗೋಲ್ಕೊಂಡದ ಶಹ ಸೋದರಳಿಯನಾಗಿದ್ದರೆ, ಅಹಮ್ಮದ್ ನಗರದವ ಖಾಸಾ ಸೋದರನಾಗಿದ್ದ.

ಆ ಅನಿರೀಕ್ಷಿತ ಸಂಕಟ ಎದುರಿಸಲು ಚಾಂದ್ ಬೀಬಿ ಸನ್ನದ್ಧಳಾದಳು. ನುರಿತ ಸೇನಾನಿ, ಅಫಜಲ್ ಖಾನನನ್ನು ಸೈನ್ಯಾಧಿಕಾರಿಯಾಗಿಸಿ ವೈರಿಗಳನ್ನು ಹಿಮ್ಮೆಟ್ಟಿಸಲು ಕಳಿಸಿಕೊಟ್ಟಳು. ಬಿಜಾಪುರ ಕೋಟೆಯ ರಕ್ಷಣೆಗೆ ತಾನು ನಿಂತುಕೊಂಡು, ಕೀಶ್ವರ್ ಖಾನನ ಸಹಾಯ ಪಡೆದಳು. ಜೊತೆಗೆ ಮರಾಠರ ಬಳಿ ದೂತರನ್ನು ಸಹಾಯಕೋರಿ ಕಳಿಸಿದಳು. ಅವರು ಹೊರಗಣಿಂದಲೇ ವೈರಿಗಳಿಗೆ ಪೂರೈಕೆಯಾಗುತ್ತಿದ್ದ ಅನ್ನ ನೀರಿಗೆ ಕಡಿವಾಣ ಹಾಕಿದರು! ಇತರ ಸರದಾರರೂ ಸಹಕರಿಸಿ, ಚಾಂದ್ ಬೀಬಿ ವೈರಿಗಳ ಜಂಟೀ ಸೈನ್ಯ ಮುಂದರಿಯದಂತೆ ನೋಡಿಕೊಂಡಳು. ಆಯಕಟ್ಟಿನ ಸ್ಥಳದಲ್ಲಿ ಅಫಜಲ್ ಖಾನನು ವೈರಿಗಳನ್ನು ಹಿಮ್ಮೆಟ್ಟಿಸುವಲ್ಲಿ ಯಶಸ್ವಿಯಾದ. ಸಂಘರ್ಷ ಹಲವು ಕಾಲ ಮುಂದರಿಯಿತು.

ಆದರೆ ಬಿಜಾಪುರದಲ್ಲಿ ಕೀಶ್ವರ್ ಖಾನನು ಪ್ರಬಲನಾಗತೊಡಗಿದ್ದ ಚಾಂದ್ ಬೀಬಿಯ ಮಾತಿಗೆ ಬೆಲೆಯಿತ್ತು ನೆರವಿಗೆ ಬಂದಿದ್ದ ಸಣ್ಣ ರಾಜರು ನವಾಬರುಗಳನ್ನು ಆತ ಸೌಜನ್ಯದಿಂದ ನಡೆಸಿಕೊಳ್ಳಲಿಲ್ಲ. ಜೊತೆ ಆಕ್ರಮಣಕಾರರಿಂದ ವಶಪಡಿಸಿಕೊಂಡಿದ್ದ ಆನೆ, ಕುದುರೆ, ಮದ್ದು ಗುಂಡುಗಳನ್ನು ತನಗೇ ಒಪ್ಪಿಸುವಂತೆ ಅರಸನ ಸಹಿಯ ನಕಲುಮಾ ರಾಜಾಜ್ಞೆ ಹೊರಡಿಸಿದ. ಇದರಿಂದ ಸೇನಾ ಮುಖ್ಯಸ್ಥರೂ ಇತ ಮುಖಂಡರೂ ನೊಂದುಕೊಂಡರು. ಅಸಂತುಷ್ಟರೆಲ್ಲ ಒಂದಾದರೆ ಗಂಡಾಂತರ ಕಾದಿಟ್ಟದ್ದು ಎಂದು ಮನಗಂಡಿದ್ದ ಚಾಂದ್ ಬೀಬಿ ಅವರನ್ನೆ ಸಂತೈಸಿ, ಪರಿಸ್ಥಿತಿಯನ್ನು ಸಂಭಾಳಿಸತೊಡಗಿದಳು.

ಈಗ, ಅವರೆಲ್ಲರ ಸಹಾಯದಿಂದ ಚಾಂದ್ ಬೀಬಿಯು ತನ್ನನ್ ಪದಚ್ಯುತಗೊಳಿಸಬಹುದು ಎಂಬ ಆತಂಕ ಕೀಶ್ವರ್ ಖಾನನನ್ ಕಾಡಲಾರಂಭಿಸಿತು. ಈಗಾಗಲೇ ಸರ್ವಾಧಿಕಾರದ ರುಚಿಯನ್ನು ಆತ ಸಾಕಷ್ ಅನುಭವಿಸಿದ್ದ. ಎಲ್ಲೆಡೆಗೆ ಗೂಢಚಾರರನ್ನು ನೇಮಿಸಿದ್ದ. ಚಾಂದ್ ಬೀಬಿಯ ವಿಶ್ವಾಸಾರ್ಹರಾಗಿದ್ದ ನಿಷ್ಠ ಸಭಾಸದರ ಸಭೆಯನ್ನು ಕರೆದಳು. ಹೆಚ್ಚಿನ ಸದಸ್ ಮೆಚ್ಚುಗೆ ಗೌರವಗಳಿಗೆ ಪಾತ್ರನಾಗಿದ್ದ, ಸವಣೂರು ಪ್ರಾಂತದ ನವಾಬನು ಆಗಿದ್ದ ಮುಸ್ತಾಫಾ ಖಾನನನ್ನು ರೀಜಂಟ್ ಮಾಡಬಹುದು ಎಂಬ ಸಲ ಬಂದಿತು. ಇದನ್ನು ಗೂಢಚಾರರಿಂದ ಅರಿತ ಕೀಶ್ವರ್ ಖಾನನು ಮುಸ್ತಾಫ ಖಾನನನ್ನು ಕೊಲ್ಲಿಸಿಬಿಟ್ಟ!

ಈ ಆಘಾತದಿಂದ ಚಾಂದ್ ಬೀಬಿಯ ಸಹನೆ ಮೀರಿತು. ಕೀಶ್ವ ಖಾನನ ಹೇಯ ಕೃತ್ಯವನ್ನು ಬಹಿರಂಗವಾಗಿಯೇ ಖಂಡಿಸಿದಳು. ಇದರಿಂ ಕೆರಳಿದ ಕೀಶ್ವರ್ ಖಾನನು, "ಚಾಂದ್ ಬೀಬಿಯದೆಲ್ಲ ಬರೀ ನಟನೆ! ತ ತವರಾದ ಅಹಮ್ಮದ್ ನಗರದವರಿಗೇ ಬಿಜಾಪುರ ಕೋಟೆಯನ್ ಕೊಡಮಾಡಲು ಷಡ್ಯಂತ್ರ ರಚಿಸಿದ್ದಾಳೆ! ಅವಳೇ ಜಂಟಶಾಹಿಗಳ ಆಕ್ರಮಣ ಕಾರಣಳಾಗಿದ್ದಾಳೆ!" ಎಂದು ಅಪಪ್ರಚಾರವನ್ನು ಪ್ರಾರಂಭಿಸಿದ.

ಬಿಜಾಪುರದ ಸರದಾರರಲ್ಲಿ ಎರಡು ಬಣಗಳಾದವು. ಕೀಶ್ವರ್ ಖಾನ ತನ್ನ ಅಧಿಕಾರದ ಅಲ್ಪ ಅವಧಿಯಲ್ಲಿ ದೊಡ್ಡ ಸಂಖ್ಯೆಯಲ್ಲಿ ಬೆಂಬಲಿಗರನ್ ಬೇರೆ ಬೇರೆ ಹುದ್ದೆಗಳಲ್ಲಿ ನೇಮಿಸಿದ್ದ. ಸಾಕಷ್ಟು ಸಂಖ್ಯೆಯಲ್ಲಿ ಹಿಂಬಾಲಕರನ್ ಪಡೆದಿದ್ದ. ಇವರೆಲ್ಲ ಸೇರಿ ಕೀಶ್ವರ್ ಖಾನನನ್ನು ಬಲವಾಗಿ ಸಮರ್ಥಿಸಿದರ ನಿಷ್ಠರಾದ ಸೇನಾನಿಗಳು, ನಿಜಸ್ಥಿತಿ ಅರಿತ ಹಿರಿಯರು, ಶತ್ರು ಸೈನ್ಯವನ್

ಹಿಂದಕ್ಕೆ ಅಟ್ಟುವಲ್ಲಿ ಹೋಗಿದ್ದರು. ಚಾಂದ್ ಬೀಬಿಯ ಸಮರ್ಥಕರು ಕಡಿಮೆ ಜನ ಇದ್ದರು. ಹೀಗಾಗಿ ಕೀಶ್ವರ್ ಖಾನನಿಗೆ ರಕ್ಕಸ ಬಲ ಬಂದಿತು. ಅರಮನೆಯನ್ನು ಬಿಟ್ಟು ಹೋಗುವಂತೆ ಚಾಂದ್ ಬೀಬಿಗೆ ನಿರ್ದೇಶನ ಕಳಿಸಿದ. ಆಕೆ ಒಪ್ಪಲಿಲ್ಲ. ಅವಳನ್ನು ಗೃಹಬಂಧಿಯಾಗಿಸಿ ಸಾತಾರಾದ ಜೈಲಿನಲ್ಲಿ ಇರಿಸಲಾಯಿತು. ಬಿಜಾಪುರದ ಕೋಟೆಯಿಂದ ಹೊರಟ ಸಶಸ್ತ್ರ ಸೈನಿಕರು ಸುತ್ತುವರಿದ ಮೇಣೆ, ಮತ್ತು ಹಿಂದಿನ ಎತ್ತಿನಗಾಡಿಯಲ್ಲಿ ಬಿಗಿಯಾದ ಬಂದೋಬಸ್ತಿನಲ್ಲಿ ಹೊರಟ ಸೇವಕಿಯರನ್ನು ನೋಡಿದ ಜನ ಕಾರಣವನ್ನು ಊಹಿಸಿದರು, ಕಣ್ಣೀರಿಟ್ಟರು. ಗುಜುಗುಜು ಅಶಾಂತಿಗಳು ಹರಡಲಾರಂಭಿಸಿದವು

**ಜೈಲಿನಿಂದ ಬಿಡುಗಡೆ :** ಅಹಮ್ಮದ್ ನಗರ ಮತ್ತು ಗೋಲ್ಕೊಂಡ ಅರಸರ ಪರವಾಗಿ ಮುತ್ತಿಗೆ ಹಾಕಿದ ಸೈನ್ಯವನ್ನು ಹಿಂದೂಡುವದರಲ್ಲಿ ಯಶಸ್ವಿಯಾಗಿದ್ದ ಅಫಜಲ್ ಖಾನ್ ಮತ್ತಿತರ ಸೇನಾನಾಯಕರಿಗೆ ಚಾಂದ್ ಬೀಬಿಯ ಬಂಧನದ ಸುದ್ದಿ ತಿಳಿಯಿತು. ಅವರಲ್ಲಿ ಮುಖಂಡರು ಆ ಕೂಡಲೇ ಬಿಜಾಪುರಕ್ಕೆ ವಾಪಸ್ ಆದರು. ಹಲವಾರು ಜನೋಪಯೋಗಿ ಕಾರ್ಯಗಳಿಂದ, ಚಾಂದ್ ಬೀಬಿ ಪ್ರಜೆಗಳಿಗೆ ಪ್ರೀತಿಯವಳಾಗಿದ್ದಳು. ನಾಯಕರು ಹಿಂದಿರುಗಿದೊಡನೆ, ಈಗಾಗಲೇ ರೊಚ್ಚಿಗೆದ್ದ ಜನರು ಪ್ರತಿಭಟನೆಗೆ ಸಿದ್ಧರಾದರು. ಜನರ ಬೆಂಬಲದೊಂದಿಗೆ ಸೈನ್ಯದ ಮುಖಂಡರು ಚಾಂದ್ ಬೀಬಿಯ ರಕ್ಷಣೆಗೆ ಸಿದ್ಧರಾದರು.

ಈ ಬೆಳವಣಿಗೆಯಿಂದ ಕೀಶ್ವರ್ ಖಾನನು ಹೆದರಿಹೋದ. ಪಲಾಯನವೊಂದೇ ಅವನಿಗೆ ಉಳಿದ ಮಾರ್ಗವಾಗಿತ್ತು. ಹೊಸ ಆಶ್ರಯವನ್ನು ಹುಡುಕಿಕೊಂಡು ಅಹಮ್ಮದ್ ನಗರಕ್ಕೆ ಓಡಿದ. ಅಲ್ಲಿ ನಿರಾಸೆ-ಅವಮಾನಗಳು ಕಾದಿದ್ದವು. ಅಲ್ಲಿಂದ ಗೋಲ್ಕೊಂಡದತ್ತ ಕಂಬಿಕಿತ್ತ. ಆದರೆ ಮಾರ್ಗದಲ್ಲಿ ಆದಿಲ್ ಶಾಹಿ ಗೂಢಚಾರರು ಅವನನ್ನು ಗುರುತಿಸಿ ಕೊಂದುಹಾಕಿದರು.

ಆ ತನಕ, ಬಾಲಕ ಅರಸ ಇಮ್ಮಡಿ ಇಬ್ರಾಹಿಮನ ತಾಯಿ ಓಲಿಯಾ ಹಜರತ್ ಸಾಹೇಬಾ ಅಥವಾ ಬಡೀ ಸಾಹೇಬಾ ಬಿಜಾಪುರದ ಉಸ್ತುವಾರಿ ವಹಿಸಿಕೊಂಡಳು. ಹಿಂದಿರುಗಿದ ನಿಷ್ಠ ಸೇನಾನಿಗಳ ಸಹಾಯದಿಂದ ಶೀಘ್ರವೇ ಚಾಂದ್ ಬೀಬಿಯ ಬಿಡುಗಡೆಯ ವ್ಯವಸ್ಥೆಮಾಡಿ, ಸಕಲ ರಾಜಮರ್ಯಾದೆಯಿಂದ ಸಾತಾರಾದಿಂದ ಬಿಜಾಪುರಕ್ಕೆ ಕರೆತರಲಾಯಿತು. ಜನರು ನೆಮ್ಮದಿಯ ಉಸಿರು ಬಿಟ್ಟರು.

# 7

# ಚಾಂದ್ ಬೀಬಿಯ ಆಡಳಿತ

ರೀಜಂಟ್ ಅಥವಾ ರಾಜಪ್ರತಿನಿಧಿಯಾಗಿ ಚಾಂದ್ ಬೀಬಿ ಆಡಳಿತ ಸೂತ್ರಗಳನ್ನು ಎತ್ತಿಕೊಂಡಳು. ಸಾಕಷ್ಟು ಸಮಸ್ಯೆಗಳನ್ನು ಆಕೆ ಎದುರಿಸಬೇಕಾಗಿತ್ತು.

ಯುಸೂಫ್ ಆದಿಲ್ ಶಹನ ಕಾಲದಿಂದಲೂ ವಿದೇಶಿಗರಿಗೆಲ್ಲ ಬಿಜಾಪುರದಲ್ಲಿ ಉದಾರವಾದ ಮತ ಭೇದವಿಲ್ಲದ ಸ್ವಾಗತ ಕಾದಿರುತ್ತಿದ್ದುದರಿಂದ ಮತ್ತು ಪಶ್ಚಿಮ ಕರಾವಳಿಯ ಮುಖ್ಯ ಬಂದರುಗಳಿಂದ, ಸತತವಾದ ಸಮುದ್ರ ಮಾರ್ಗವು ನೇರವಾಗಿ ಮಧ್ಯಪೂರ್ವದ ನಾಡುಗಳಿಗೆ ಇದ್ದುದರಿಂದ ಅವಕಾಶ ವಂಚಿತರಾದ ಧೀಮಂತರು, ಸಾಹಸಿಗಳು, ಕಲಾಕಾರರು ಬಿಜಾಪುರಕ್ಕೆ ಬಂದುಬಿಡುತ್ತಿದ್ದರು. ರಾಜಾಶ್ರಯ ಪಕ್ಕಾ ಇದ್ದು, ಸಾಂಸ್ಕೃತಿಕವಾಗಿ ಬಿಜಾಪುರವು ತುಂಬ ಎತ್ತರ ತಲಪಿತಾದರೂ ಆಡಳಿತಗಾರರಿಗೆ ದೇಶಿವಿದೇಶಿ ಹಾಗೂ ನೆಲೆಸಿಗರ ನಡುವಿನ ಸಮತೋಲ ಕಾಯ್ದುಕೊಂಡು ಹೋಗುವದು ಕಷ್ಟದ ಕೆಲಸವಾಗಿತ್ತು. ಚಾಂದ್ ಬೀಬಿ ಹೆಚ್ಚಿನ ಚಾಕಚಕ್ಯತೆಯಿಂದ ಈ ಸಮತೋಲ ಸಾಧಿಸಿದಳು.

ದಖ್ಖನಿಗಳಲ್ಲಿ ಶಿಯಾ, ಸುನ್ನಿ ಭೇದ ಮಾಡದೇ ಯೋಗ್ಯತೆಗಳನ್ನು ಅನುಸರಿಸಿ, ಅಧಿಕಾರಿಗಳ ಆಯ್ಕೆಮಾಡಿದಳು. ಆಫಾಕಿ ವಿದ್ವಾಂಸರಿಗೆ ಜಾಗೀರು, ವಿದ್ಯಾಸಂಸ್ಥೆಗಳಲ್ಲಿ ಯೋಗ್ಯ ಸ್ಥಾನಗಳನ್ನು ಕೊಡಮಾಡಿದಳು. ಆಡಳಿತದಿಂದ ದೂರವಿಟ್ಟಳು.

ಇಬ್ರಾಹಿಮನ ಶಿಕ್ಷಣ ಮತ್ತು ರಾಜ್ಯಪಾಲನೆಯ ತರಬೇತಿಯತ್ತ ವಿಶೇಷ ಲಕ್ಷ್ಯ ಪೂರೈಸಿದಳು. ಹಿಂದೂ, ಮುಸ್ಲಿಂ ಶಿಕ್ಷಕರನ್ನು ಜೊತೆಜೊತೆಯಾಗಿಯೇ ಬೋಧನೆಗೆ ನೇಮಿಸಿದಳು. ತನ್ನಂತೆಯೇ ತುರ್ಕಿ, ಫಾರಸಿ ಆರಬಿ ಭಾಷೆಗಳಲ್ಲಿ ಪರಿಣತಿ ಪಡೆಯುವಂತೆ ನೋಡಿಕೊಂಡಳು. ಜೊತೆಗೆ ಮರಾಠಿ, ಕನ್ನಡ, 'ದಖನಿ' ಭಾಷೆಗಳು 'ತಾಯ್ನುಡಿ' ಎನಿಸಿಕೊಳ್ಳುವಷ್ಟು ಇಬ್ರಾಹಿಮನಿಗೆ ಪ್ರಿಯವಾದವು. ರುಕ್ಮಾಂಗದ ಪಂಡಿತನೆಂಬ ಘನ ವಿದ್ವಾಂಸನು ಮುಂದೆ ಇಬ್ರಾಹಿಮನಿಗೆ ಸರಸ್ವತಿ ಆರಾಧನೆಯ ದೀಕ್ಷೆಕೊಡುತ್ತಾನೆ! ಈ ರುಕ್ಮಾಂಗದನು ಸಂಸ್ಕೃತ ಭಾಷೆಯಷ್ಟೆ ಅಲ್ಲದೇ ತತ್ವಶಾಸ್ತ್ರ, ವೈದ್ಯಕೀಯ ಸಂಗೀತಗಳಲ್ಲೂ ಪಾರಂಗತನಾಗಿದ್ದ. ಆತನ ರಚನೆಗಳು ಮರಾಠಿ, ಕನ್ನಡ, ದಖನಿಗಳಲ್ಲಿವೆ. ಬಿಜಾಪುರದಲ್ಲಿ ದೊಡ್ಡ ಸಂಖ್ಯೆಯಲ್ಲಿ ತಳವೂರಿದ್ದ ಸೂಫಿಗಳಿಂದಾಗಿ ಭಾರತೀಯ ಮಿಶ್ರ ಸಂಸ್ಕೃತಿಯನ್ನು ಆದಿಲ್ ಶಾಹಿಗಳು ರಕ್ತಗತ ಮಾಡಿಕೊಂಡುಬಿಟ್ಟಿದ್ದರು.

ಆದರೆ ಅವರೆಲ್ಲ ಇಸ್ಲಾಂ ಧರ್ಮದ ಕಟ್ಟಾ ಅನುಯಾಯಿಗಳೂ ಆಗಿದ್ದರಿಂದ ಆ ಧರ್ಮದ ಆಳವಾದ ಅಧ್ಯಯನ ರಾಜಮನೆತನದವರಿಗೆ ಕಡ್ಡಾಯವಾಗಿತ್ತು. ಮುಖ್ಯಮಂತ್ರಿಯಾಗಿ ದಿಲಾವರ್ ಖಾನನು ಚಾಂದ್ ಬೀಬಿಯ ಮೇಲಾಡಳಿತದಲ್ಲಿ ಕೆಲಸಮಾಡಿದ. ಆತನ ಹಿರಿಯ ಮಗ, ಕುರಾನ್ ಮತ್ತು ಆ ಸಂಬಂಧಿತ ವ್ಯಾಖ್ಯಾನ, ಟೀಕೆ, ಪವಿತ್ರ ವಾಕ್ಯಗಳ ಪಠನದಲ್ಲೆಲ್ಲ ಪರಿಣತನಿದ್ದ. ಆತ ಇಬ್ರಾಹಿಮನ ಒಡನಾಡಿ ಯಾಗುವಂತೆ ಚಾಂದ್ ಬೀಬಿ ನೋಡಿಕೊಂಡಳು. ಈ ಮುಹಮ್ಮದ್ ಖಾನನು ಕವಿಯೂ ಆಗಿದ್ದ. ಹೀಗಾಗಿ ತನಗಿಷ್ಟವಾಗಿದ್ದ ಪರ್ಶಿಯನ್ ಕಾವ್ಯಗಳ ಉತ್ತಮ ಪರಿಚಯವನ್ನು ಇಬ್ರಾಹಿಮನಿಗೆ ಕೊಡಮಾಡಿದ. ಇದೆಲ್ಲದರ ಜೊತೆಗೆ ಯುದ್ಧ ತರಬೇತಿ, ಶಸ್ತ್ರಾಸ್ತ್ರ ಪ್ರಯೋಗಗಳಲ್ಲಿ ನೈಪುಣ್ಯ, ಆಟೋಟಗಳಲ್ಲೂ ಆಸಕ್ತಿಯನ್ನು ಇಬ್ರಾಹಿಮನು ತಳೆಯುವಂತೆ ಚಾಂದ್ ಬೀಬಿ ಮಾಡಿದಳು. ಸ್ವತಃ ಅವಳೇ ಈ ಕ್ಷೇತ್ರಗಳಲ್ಲೆಲ್ಲ ಮಿಗಿಲಾದ ಪರಿಣತಿ ಪಡೆದಿದ್ದಳಲ್ಲ! ಬಿಜಾಪುರದಲ್ಲಿ ನೆಲೆಗೊಳ್ಳುತ್ತಿದ್ದ ಸುಸಂಸ್ಕೃತ ವಾತಾವರಣ, ಸಾಕು ತಾಯ್ತಂದೆಗಳಿಂದ ಪಡೆದ ಸಂಸ್ಕಾರ, ಲಭ್ಯವಿದ್ದ ಯಾವತ್ತೂ ಉತ್ತಮ ತರಬೇತಿ ಮತ್ತು ಸ್ವತಃ

ಬೆಳೆಸಿಕೊಂಡ ಎಣೆಯಿಲ್ಲದ ಸಂಗೀತ ಪ್ರೇಮಗಳು ಇಬ್ರಾಹಿಮನನ್ನು ಅಂದಿನ ದಖ್ಖನದ, ಅಷ್ಟೇ ಏಕೆ ಭಾರತದಲ್ಲೇ ಅಪೂರ್ವ ಅರಸನನ್ನಾಗಿ ರೂಪಿಸಿದವು.

ಪತಿ ಅಲಿ ಆದಿಲ್ ಶಹನ ಕೊಲೆಯಾದಾಗ ಚಾಂದ್ ಬೀಬಿಯ ವಯಸ್ಸು ಮೂವತ್ತರ ಒಳಗೆ ಇತ್ತು. ಆದರೆ ಆತನಕ ರಾಜ್ಯಾಡಳಿತದ ಒಳ ಹೊರಗಿನ ಕಟು ಅನುಭವಗಳನ್ನೆಲ್ಲ ಆಕೆ ಪಡೆಯುವ ಸಂದರ್ಭಗಳು ಒದಗಿದ್ದವು. ತಂದೆಯ ಹಲವಾರು ಸಂಘರ್ಷಗಳು, ತಮ್ಮನ ಕ್ರೌರ್ಯ ಅವಿವೇಕಗಳು, ಪತಿಯ ಕೊಲೆ, ಅಕಾರಣವಾದ ಕಾದಾಟ, ತನ್ನವರವೇ ಮುತ್ತಿಗೆಗಳು, ಸರದಾರರ ಷಡ್ಯಂತ್ರಗಳು, ಅಪ್ರಾಮಾಣಿಕತೆಗಳು, ಕಾಯ ಕಾಡುತ್ತಿದ್ದ ನೆರೆಹೊರೆ ರಾಜರ ಮತ್ತು ಮೊಗಲರ ಆಕ್ರಮಣದ ಆತಂಕ ಭವಿಷ್ಯದ ಅನಿಷ್ಟ ತಡೆಗಳಿಂದ ಚಾಂದ್ ಬೀಬಿ ಎದೆಗುಂದಲಿಲ್ಲ. ಅವನ್ನೆ ಎದುರಿಸುವ ಸಾಮರ್ಥ್ಯವನ್ನು ಬೆಳೆಸಿಕೊಂಡಳು. ಮಧ್ಯಯುಗದ ರಾಜಕಾರಣದಲ್ಲಿ ಕೊಲೆ ಕಗ್ಗೊಲೆ, ಧರ್ಮಾಂಧತೆಯ ಪ್ರಕರಣಗಳು ಸಾಮಾಜಿಕ ಕ್ರೌರ್ಯಗಳು, ಆಕಸ್ಮಿಕ ಆಕ್ರಮಣಗಳು ಸಾಮಾನ್ಯವಾಗಿದ್ದವು ಅರಸರಾದವರು ಸತತವಾಗಿ ಜಾಗರೂಕರಾಗಿರಬೇಕಿತ್ತು. ಸಂಕಟದ ಸಮಯಗಳಲ್ಲೇ ಅವರ ಧೈರ್ಯ-ಸ್ಥೈರ್ಯ, ಪ್ರಸಂಗಾವಧಾನಗಳ ಪರೀ ಆಗುತ್ತಿತ್ತು.

ಇಬ್ರಾಹಿಮನಿಗೆ ಪಟ್ಟಕಟ್ಟಿದೊಡನೆ, ಬಿಜಾಪುರವನ್ನು ಕಬಳಿಸಲ ಗೋಲ್ಕೊಂಡ ಮತ್ತು ಅಹಮ್ಮದ್ ನಗರಗಳು ಜಂಟಿ ದಾಳಿಮಾಡಿದ ಪ್ರಸಂಗವನ್ನು ನೋಡಿದ್ದೇವೆ. ರಾಜ್ಯದ ಎರಡು ಬೇರೆ ಬೇರೆ ದಿಕ್ಕುಗಳಿಂದ ಆಕ್ರಮಣ ನಡೆಸಿದ ವೈರಿ ಸೈನ್ಯವನ್ನು ಹಿಮ್ಮೆಟ್ಟಿಸಲು ಚಾಂದ್ ಬೀಬಿಯ ಅಫಜಲ್ ಖಾನ್ ಮತ್ತು ಇತರ ಸೈನ್ಯಾಧಿಕಾರಿಗಳನ್ನು ಕಳಿಸಿದ್ದಳಷ್ಟೆ. ಸ್ವತ ಬಿಜಾಪುರದ ರಾಜಧಾನಿಯ ಕೋಟೆಯ ರಕ್ಷಣೆಯ ಜವಾಬ್ದಾರಿ ಹೊತ್ತಿದ್ದಳು ಕೀಶ್ವರ್ ಖಾನನು ಅದಕ್ಕೆ ಹೊಣೆಗಾರನಾಗಿದ್ದರೂ, ವಿಶ್ವಾಸ ಪಾತ್ರನಾಗಿರಲಿಲ್ಲವೆಂದ ನೋಡಿದ್ದೇವೆ. ಒಂದು ರಾತ್ರಿ, ವೈರಿ ಸೈನ್ಯ ಸಮೀಪಿಸುತ್ತಿರುವ ಸಮಾಚಾ ತಿಳಿದ ಚಾಂದ್ ಬೀಬಿ ಜಾಗರೂಕಳಾದಳು. ಮಳೆಗಾಲದ ದಿನಗಳು. ಒಮ್ಮೆ ಧಾರಾಕಾರವಾದ ಮಳೆ, ದಿನ-ರಾತ್ರಿ ಸುರಿಯುತ್ತಲಿತ್ತು. ಕೋಟೆಯ ಒಂದ ಭಾಗ ಬಿರುಕುಬಿಟ್ಟ ಸುದ್ದಿ ತಿಳಿದೊಡನೆ, ಸೈನಿಕ ವೇಷ ಧರಿಸಿ ಸಶಸ್ತ್ರಳಾ ಕುದುರೆಯೇರಿ ಶೀಘ್ರವೇ ಚಾಂದ್ ಬೀಬಿ, ಅಪಾಯದ ಸ್ಥಳ ತಲಪಿದಳು ಆ ಕೂಡಲೇ ರಾಜ್ಯದ ಎಲ್ಲ ಮೇಸ್ತ್ರಿಗಳಿಗೆ, ಕರೆಹೋಯಿತು. ಹೊರ ಕಾದಾಟ, ಒಳಗಡೆ ಕೋಟೆಯ ರಿಪೇರಿಗಳು ಅವ್ಯಾಹತವಾಗಿ ನಡೆದವು

ಬಿರುಕುಬಿಟ್ಟಿದ್ದ ಸ್ಥಳ ಭದ್ರವಾಗುವ ತನಕ ಚಾಂದ್ ಬೀಬಿ ಆ ಸ್ಥಳ ಬಿಟ್ಟು ಅಲುಗಾಡಲಿಲ್ಲ. ಮುಂದಾಳು ತೋರ್ಪಡಿಸಿದ ಕೆಚ್ಚೆದೆ, ಕೆಲಸಗಾರರಲ್ಲಿ ಹೆಚ್ಚಿನ ಹುಮ್ಮಸ್ಸು ತುಂಬಿತು. ಜನರೆಲ್ಲ ರಾಣಿಯಲ್ಲಿ ಹೆಚ್ಚಿನ ಪ್ರೀತಿ-ಅಭಿಮಾನಗಳನ್ನು ತಾಳಿದರು. ಒಂದು ವರ್ಷದ ಕಾಲ ನಡೆದ ಮುತ್ತಿಗೆಯನ್ನು ಕೊನೆಗೂ ಚಾಂದ್ ಬೀಬಿ ಮುರಿದಳು. ಸೋತುಹೋದ ಜಂಟೀ ಸೈನ್ಯವು ಹಿಂದಿರುಗಿತು.

ಈ ಸಮಯದಲ್ಲೇ ಕೋಟೆಯ ಒಳಗಡೆಯ ಷಡ್ಯಂತ್ರ ಮತ್ತು ಕೀಶ್ವರ್ ಖಾನನ ವಿಶ್ವಾಸಘಾತಗಳನ್ನು ನೋಡಿದ್ದೇವೆ. ಅದು ರಾಜ ಪ್ರತಿನಿಧಿಯಾಗಿದ್ದ ಚಾಂದ್ ಬೀಬಿಯ ಸಾಮರ್ಥ್ಯವನ್ನು ಒರೆಗಲ್ಲಿಗೆ ಹಚ್ಚುವ ಪ್ರಸಂಗವಾಗಿತ್ತು. ಇನ್ನು ಮುಂದಿನ ದಿನಗಳಲ್ಲಿ ಇಂಥ ಇನ್ನೂ ಇಕ್ಕಟ್ಟಿನ ಸಂದರ್ಭಗಳನ್ನು ಆಕೆ ಎದುರಿಸಬೇಕಾಯಿತು.

ಸಾತಾರಾ ಜೈಲಿನಿಂದ ಬಿಡುಗಡೆಯಾಗಿ ಬಂದ ಬಳಿಕದ ಏಳೆಂಟು ವರ್ಷಗಳನ್ನು ಚಾಂದ್ ಬೀಬಿ ಸ್ಥಿರವಾದ ಆಡಳಿತ ಕೊಡುವುದರಲ್ಲಿ ವಿನಿಯೋಗಿಸಿದಳು. ಇಬ್ರಾಹಿಮನು ರಾಜನಾಗಿ ವ್ಯವಸ್ಥಿತ ರೂಪದಲ್ಲಿ ರಾಜ್ಯಕಾರಭಾರದ ತರಬೇತಿ ಪಡೆಯುತ್ತಲಿದ್ದ.

# 8

# ಮರಳಿ ಅಹಮ್ಮದ್ ನಗರಕ್ಕೆ; ಮೊಗಲರನ್ನು ಎದುರಿಸಿದ ದಿಟ್ಟೆ

ಮೊಗಲರ ಆಕ್ರಮಣದ ಭೀತಿ, ಚಾಂದ
ಬೇಬಿಯನ್ನು ಖಾಯಂ ಕಾಡುತ್ತಲಿತ್ತು
ಅಹಮ್ಮದ್ ನಗರ ಮತ್ತು ಬಿಜಾಪುರಗಳು ಒಂದಾಗಿ ಸೈನ
ಕಟ್ಟಿಕೊಂಡರೆ, ಮೊಗಲರನ್ನು ಧೈರ್ಯವಾಗಿ ಎದುರಿ
ಬಹುದು ಎಂಬುದು ಆಕೆಯ ಮನದಿಚ್ಛೆಯಾಗಿತ್ತು
ಅಹಮ್ಮದ್ ನಗರದ ಅರಸು ಮುರ್ತುಝಾ
ಒಡಹುಟ್ಟಿದವನಾದರೆ, ಗೋಲ್ಕೊಂಡದ ಕುತುಬ್‌ಶ
ಸೋದರ ಸಂಬಂಧಿ! ಆದರೆ ಇವರಿಬ್ಬರೂ ಬಿಜಾಪುರ
ಸಂಕಟ ಸಮಯದಲ್ಲಿ ಸಹಾಯ ನೀಡುವದರ ಬದಲ
ದಾಳಿ ಮಾಡಿದ್ದರು. ಆದರೂ ಬಿಜಾಪುರದ ಏಳ್ಗೆಗಾಗಿ
ಚೌಂದ್ ಬೀಬಿ ಎರಡೂ ರಾಜ್ಯಗಳ ಸಖ್ಯವನ್ನು ಸಾಧಿಸಲ
ಹವಣಿಸಿದಳು. ಮುರ್ತುಝಾನ ಮಗ ಮಿರಾನನಿಗೆ ತನ
ಸಾಕುಮಗಳು (ಇಬ್ರಾಹಿಮನ ಸೋದರಿ) ಖದೀಜಾಳನ
ಮದುವೆಮಾಡುವ ಪ್ರಸ್ತಾಪವನ್ನು ಮಾಡಿದಳು
ಅಕಾರಣವಾಗಿ ಬಿಜಾಪುರವನ್ನು ಆಕ್ರಮಿಸಿ ಏಟು ತಿಂದ
ಮುರ್ತುಝಾ ಹಣ್ಣಾಗಿದ್ದ. ಕೂಡಲೇ ಈ ಸೂಚನೆ
ಒಪ್ಪಿಕೊಂಡ. ತಾನಾಗಿಯೇ ಈ ಸೂಚನೆಯನ್ನು ಈ

ಇಮ್ಮಡಿ ಇಬ್ರಾಹಿಂ ಆದಿಲ್ ಶಹನಿಗೆ ಕಳಿಸಿದಾಗ ಅವನು ಸಂತೋಷದಿಂದ ಸಮ್ಮತಿಸಿದ.

ನಾಲ್ಕು ತಿಂಗಳ ಕಾಲ ವಿವಾಹ ಮಹೋತ್ಸವ ನಡೆಯಿತೆಂದು ಎರಡೂ ಮನೆತನಗಳ ಇತಿಹಾಸಕಾರರು ಬರೆದಿದ್ದಾರೆ. ಚಾಂದ್ ಬೀಬಿಯು ಮದುವೆಯಾದಾಗಿನಿಂದ ತನ್ನ ತವರು ಮನೆಯಾದ ಅಹಮ್ಮದ್ ನಗರಕ್ಕೆ ಹೋಗಿರಲಿಲ್ಲ. ಇಪ್ಪತ್ತೈದು ವರ್ಷಗಳು ವೈಷಮ್ಯ, ವೈರತ್ವ, ಕಾದಾಟ, ಬಳಿಕ ರಾಜ ಪ್ರತಿನಿಧಿತ್ವಗಳಲ್ಲಿ ಕಳೆದಿದ್ದವು. ಈಗ ಮದುವೆಯ ಬಾಂಧವ್ಯ ಕ್ರಮೇಣ ಸ್ನೇಹ-ಸಲಿಗೆಗಳಲ್ಲಿ ಪರಿವರ್ತನೆಯಾಗಬಹುದೆಂಬ ನಿರೀಕ್ಷೆಯಲ್ಲಿ ಚಾಂದ್ ಬೀಜಿ ನವವಧುವಿಗೆ ರಕ್ಷಕ-ಪಾಲಕಳಾಗಿ ಅವಳ ಹೊಸಮನೆಯ ತನಕ ಕಳಿಸಿ ಬೀಳ್ಕೊಟ್ಟು ಬರುವ ಸಂಭ್ರಮದಲ್ಲಿ ಹೊರಟಳು. ದಿಲಾವರ್ ಖಾನ್ ಎಂಬ ನಿಷ್ಠ ಹೊಣೆಗಾರ ಮಂತ್ರಿ ಈಗ ಪ್ರಧಾನಿಯಾಗಿದ್ದ. ಆತನನ್ನೆ ಕೆಲ ಕಾಲ ರೀಜಂಟ್ ಎಂದು ಘೋಷಿಸಲಾಯಿತು. ಇಬ್ರಾಹಿಂನೂ ಪ್ರಾಪ್ತವಯಸ್ಕನಾಗಿದ್ದ. ಚಾಂದ್ ಬೀಬಿಯ ಸೋದರ ಸೊಸೆ ಗೋಲ್ಕೊಂಡದ ರಾಜಕುಮಾರಿಯೊಡನೆ (ಆಕೆಯ ಹೆಸರೂ ಚಾಂದ್ ಸುಲ್ತಾನಾ) ಆತನ ವಿವಾಹವೇರ್ಪಟ್ಟು ಸ್ನೇಹ-ನಂಟಿಗೆ ಸಹಾಯವಾಯಿತು.

ನಾಲ್ಕು ನೂರು ಸಶಸ್ತ್ರ ಸೈನಿಕರ ರಕ್ಷಣೆಯಲ್ಲಿ ಮದುವೆಯ ದಿಬ್ಬಣ ಹೊರಟಿತು. ಲೆಕ್ಕವಿಡಲಾರದಷ್ಟು ಆಭರಣಗಳು, ಬಟ್ಟೆ ಬರೆಗಳು, ಇತರ ಸಾಮಾನು ಸರಂಜಾಮು, ಸೇವಕರು ಇದ್ದರು. ಹೊಸದೊಂದು ಸ್ನೇಹ-ಬಾಂಧವ್ಯದ ಯುಗ ಪ್ರಾರಂಭವಾಗಿ ಎರಡೂ ರಾಜ್ಯಗಳ ಆಳುವ ವರ್ಗಗಳಿಗೂ ಪ್ರಜೆಗಳಿಗೂ ನೆಮ್ಮದಿಯ ದಿನಗಳು ಒದಗಿಬರಹುದೆಂಬ ಭರವಸೆಯಲ್ಲಿ ಚಾಂದ್ ಬೀಬಿ ಅಹಮ್ಮದ್ ನಗರ ತಲಪಿದಳು. ಆದರೆ ತನ್ನ ಆಗಮನವೇ ತವರಿನ ಶಾಂತಿ ಕದಡಲು ನಾಂದಿಯಾಗಬಹುದು ಎಂದು ಅವಳು ಕನಸಿನಲ್ಲೂ ನಿರೀಕ್ಷಿಸಿರಲಿಲ್ಲ!

ಚಾಂದ್ ಬೀಬಿಯ ಮದುವೆಯ ಕಾಲಕ್ಕೆ ಸೊಲ್ಲಾಪುರವನ್ನು ಅವಳ ತಂದೆ ಹುಸೇನ್ ನಿಜಾಮ್ ಶಹನು, ವರದಕ್ಷಿಣೆಯ ರೂಪದಲ್ಲಿ ಅಳಿಯ ಆಲಿ ಆದಿಲ್ ಶಹನಿಗೆ ಕೊಡಮಾಡಿದ್ದ. ಆ ಮದುವೆಯ ಮೊದಲೂ ಸೊಲ್ಲಾಪುರಕ್ಕಾಗಿ ಈ ಎರಡೂ ರಾಜರುಗಳಲ್ಲಿ ಅನೇಕಬಾರಿ ಸಂಘರ್ಷ ನಡೆದಿತ್ತು. ಈಗ ವಿಧವೆಯಾಗಿ ಚಾಂದ್ ಬೀಬಿ ತವರು ಮನೆ ಸೇರಿರುವದರಿಂದ ಇಸ್ಲಾಂ ಕಾನೂನಿನ್ವಯ, ಸೊಲ್ಲಾಪುರವು ನ್ಯಾಯವಾಗಿ

ಅಹಮ್ಮದ್ ನಗರಕ್ಕೆ ಸೇರಬೇಕೆಂದು ಅಹಮ್ಮದ್ ನಗರದ ಪ್ರಧಾನ ಮಂತ್ರಿ ಸಲಾಬತ್ ಖಾನನು ಏಕಪಕ್ಷೀಯ ನಿರ್ಧಾರ ಕೈಕೊಂಡು ಸೊಲ್ಲಾಪುರ ಕೋಟೆಯನ್ನು ಆಕ್ರಮಿಸುವವನಾಗಿ ಇಬ್ರಾಹಿಂ ಆದಿಲ್ ಶಹನಿಗೆ ಸಂದೇಶ ಕಳಿಸಿದ. ಇದರಿಂದ ಕೆರಳಿದ ಇಬ್ರಾಹಿಮನು, ಅಹಮ್ಮದ್ ನಗರವನ್ನೇ ಆಕ್ರಮಿಸುವುದಾಗಿ ಬೆದರಿಕೆಯ ಪತ್ರವನ್ನು ಅಹಮ್ಮದ್ ನಗರಕ್ಕೆ ಕಳಿಸಿದ. ಬಿಜಾಪುರದ ಸೈನ್ಯದ ತುಕುಡಿಯೂ ಅಹಮ್ಮದ್ ನಗರದ ಬಳಿಯಲ್ಲಿ ಬೀಡುಬಿಟ್ಟು ಮುರ್ತುಝಾ ನಿಜಾಮ್ ಶಹನು ಈ ಗಂಡಾಂತರದ ಸೂಚನೆಗೇ ಹೆದರಿಹೋದ! ಆಂತರಿಕ ಕಲಹಗಳಿಂದಾಗಿ ಬೇಸತ್ತು ಸರದಾರರೆಲ್ಲರ ಲಕ್ಷ್ಯ ಹೊರಗೆ ಸೆಳೆಯಲು ಆತನು ಈ ಉಪಾಯ ಕೈಕೊಂಡಿದ್ದ. ಈಗ ಈ ವಿಚಾರ ತನಗೆ ತಿಳಿದೇ ಇರಲಿಲ್ಲವೆಂದು ಇಬ್ರಾಹಿಮನನ್ನು ನಂಬಿಸಿ ಸಲಾಬತ್ ಖಾನನನ್ನು ಬಂಧಿಸಿದ. ವಿಜಾಪುರ ಸೈನ್ಯ ರಾಜಧಾನಿಗೆ ಮರಳಿತು. ತಾತ್ಪೂರ್ತಿಕ ಶಾಂತಿ ನೆಲೆಸಿತು.

ಆದರೆ ಮುರ್ತುಝಾ ನಿಜಾಮ್ ಶಹ ಒಳ್ಳೆಯ ಆಡಳಿತಗಾರನಾಗಿರಲಿಲ್ಲ. ಹಿತ್ತಾಳೆ ಕಿವಿಯಿಂದ ಸರದಾರರನ್ನು ಬದಲಿಸುತ್ತಲೇ ಇರುತ್ತಿದ್ದ. ಸ್ವತಃ ಮಗ ಮಿರಾನ್‌ನನ್ನೇ ಕೊಲ್ಲಿಸುವ ಪ್ರಯತ್ನ ಎರಡು ಬಾರಿ ಕೈಗೊಂಡು ಅಯಶಸ್ವಿ ಆಗಿದ್ದ. ತಾಯಿಯನ್ನು ಸಾಯುವ ತನಕ ಸೆರೆಮನೆಯಲ್ಲಿರಿಸಿದ ಕುಖ್ಯಾತಿ ಮುರ್ತುಝಾನದು. ಈಗ ಕುಖ್ಯಾತಿಯ ಸರದಿ ಅವನ ಮಗ ಮಿರಾನ್‌ನದಾಯಿತು. ಬಹಿರಂಗವಾಗಿ ತಂದೆಯನ್ನು ಕೊಲ್ಲಲು ಇಚ್ಛಿಸದೇ ಒಂದು ದಿನ ಆತ ಸ್ನಾನ ಮಾಡುತ್ತಿದ್ದಾಗ, ಹೊರಗಿನಿಂದ ಬಾಗಿಲು ಭದ್ರಗೊಳಿಸಿ, ನೀರಿನ ಹಂಡೆಗಳನ್ನು ತುಂಬಿಸಿ, ಜೋರಾಗಿ ಬೆಂಕಿಯೊಡ್ಡಿಸಿ, ಉಗಿಯೊಳಗೇ ಆತ ಉಸಿರುಗಟ್ಟಿ ಸಾಯುವಂತೆ ಮಾಡಿದ. ರಕ್ತಪಾತ ಮಾಡಲಿಲ್ಲ ಅಷ್ಟೇ!

ಸಾಯುವ ಮೊದಲು ಮುರ್ತುಝಾ ಬುದ್ಧಿಭ್ರಮಣೆಯಿಂದ ಬಳಲುತ್ತಿದ್ದನೆಂದೂ ದಕ್ಷ ಪ್ರಧಾನಿ ಸಲಾಬತ್ ಖಾನನು ಅವನನ್ನು ಸಂಭಾಳಿಸುತ್ತಿದ್ದನೆಂದೂ ಹೇಳಲಾಗುತ್ತದೆ. ಈಗ ತಾನೇ ಅರಸನೆಂದು ಘೋಷಿಸಿಕೊಂಡ ಮಿರಾನನಿಗೆ ಅಭದ್ರತೆ, ಸಂದೇಹಗಳು ಕಾಡತೊಡಗಿದವು. ಪಟ್ಟಕ್ಕೆ ಬಾಧ್ಯಸ್ಥರಾಗಬಹುದೆಂಬ ಸಂದೇಹದಿಂದ ಒಂದೇ ಬಾರಿ 15 ಬಂಧು ಜನರ ವಧೆಗೆ ಆಜ್ಞಾಪಿಸಿದನಂತೆ! ಸರಿ, ಅಸಂತೋಷ, ಗಲಭೆಗಳು ಕಾಣಿಸಿದವು. ಪ್ರಧಾನಿಯೊಡನೆ ಮತಭೇದವಾಗಿ ಕೊಲ್ಲುವ ಯತ್ನದ ದಂಗೆಯಲ್ಲಿ ಇಬ್ಬರೂ ಹತರಾದರು. ತಂದೆಯನ್ನು ಮುಗಿಸಿ (1588)

ಮಿರಾನನು ರಾಜ್ಯವಾಳಿದ್ದು ಕೆಲವು ತಿಂಗಳು ಮಾತ್ರ!

ಮಿರಾನನಿಗೆ ಮಕ್ಕಳಿರಲಿಲ್ಲ. ಮತ್ತೆ ಅಂತಃಕಲಹ ಪ್ರಾರಂಭವಾಯಿತು. ಹೀಗಾಗಿ ಚಾಂದ್ ಬೀಬಿ ಮತ್ತು ಮುರ್ತುಝಾರ ಸೋದರನೂ ಗಡಿಪಾರಿಗೂ ಒಳಗಾಗಿದ್ದ ಎರಡನೆಯ ಬುರ್ಹಾನನ ಮಗ ಇಸ್ಮಾಯಿಲ್‌ನನ್ನು ಪಟ್ಟಕೇರಿಸಲಾಯಿತು.

## ಅಹಮ್ಮದ್ ನಗರದ ಅಂತಃಕಲಹಗಳು

ವಿಜಾಪುರಕ್ಕಿಂತ ಹೆಚ್ಚಿನ ಪ್ರಮಾಣದ ಒಳಸಂಚು, ವಿದ್ರೋಹಗಳು, ಅಪನಂಬಿಕೆಗಳು ಚಾಂದ್ ಬೀಬಿಗೆ ಅಹಮ್ಮದ್ ನಗರದಲ್ಲಿ ಕಾದಿದ್ದವು. ಹೊಸ ಬಾದಶಹನು ಚಿಕ್ಕವನಾಗಿದ್ದರಿಂದ ಇಲ್ಲಿಯೂ ರೀಜಂಟ್ ಆಗಬೇಕಾಗಿ ಬಂತು. ಆದರೆ ಹೆಚ್ಚಿನ ಆಪತ್ತಿನ ಸಂದರ್ಭದಲ್ಲಿ!

ಆಕೆಯ ಇನ್ನೊಬ್ಬ ಸೋದರ ಬುರ್ಹಾನ್ ನಿಜಾಮ್ ಶಹನು, ಸ್ವತಃ ಅಹಮ್ಮದ್ ನಗರದ ಸಿಂಹಾಸನದ ಮೇಲೆ ಕಣ್ಣಿಟ್ಟಿದ್ದನು. ಎರಡು ಬಾರಿ ಅದಕ್ಕಾಗಿ ಯತ್ನಿಸಿ ವಿಫಲನಾಗಿದ್ದ. ಅವನನ್ನು ಮುರ್ತುಝಾ ಗಡಿಪಾರು ಮಾಡಿ ದೂರದ ಊರಿನಲ್ಲಿ ಬಂದಿಯಾಗಿ ಇರಿಸಿದ್ದ. ಆತನು ತಪ್ಪಿಸಿಕೊಂಡು ಮೊಗಲ ಚಕ್ರವರ್ತಿ ಅಕ್ಬರನ ಗುಜರಾತ್ ದಂಡಯಾತ್ರೆಯ ಬಿಡದಿಗೆ ತಲಪಿದ್ದ. ಉತ್ತರದ ರಾಜ್ಯಗಳನ್ನು ಒಂದೊಂದಾಗಿ ಗೆಲ್ಲುತ್ತ ಬಂದಿದ್ದ ಅಕ್ಬರನು ದಖ್ಖನಿನ ಶಾಹೀ ರಾಜ್ಯಗಳ ಮೇಲೆ ಕಣ್ಣು ಇಟ್ಟಿದ್ದ. 'ನನ್ನ ಚಕ್ರಾಧಿಪತ್ಯವನ್ನು ಒಪ್ಪಿಕೊಳ್ಳಿ! ಕಪ್ಪವನ್ನು ಕೊಡಿ! ನಿಮ್ಮ ಪಾಡಿಗೆ ನಿಮ್ಮನ್ನು ಬಿಡುತ್ತೇನೆ!' ಎಂದು ನಾಲ್ವರೂ ಶಾಹಿಗಳಿಗೆ ಪತ್ರಗಳನ್ನು ಕಳಿಸಿದ್ದ. ಆದರೆ ಅವರು ಯಾರೂ ಉತ್ತರಿಸುವ ಗೋಜಿಗೇ ಹೋಗಿರಲಿಲ್ಲ! ಅಕ್ಬರನು ಅವಕಾಶಕ್ಕಾಗಿ ಕಾಯುತ್ತಲೇ ಇದ್ದ.

ಈಗ ಬುರ್ಹಾನನು ಬಂದದ್ದು ವರದಾನವೆಂದೇ ಅಕ್ಬರ್ ಚಕ್ರವರ್ತಿ ಭಾವಿಸಿದ. ವಿಚಾರ ಬುರ್ಹಾನನಿಗೆ ತಿಳಿಯಿತು. ತನ್ನ ಹಕ್ಕು ಜಮಾಯಿಸಲು ಇದು ಯೋಗ್ಯ ಸಮಯ ಎಂದು ಅಹಮ್ಮದ್ ನಗರಕ್ಕೆ ಹೊರಟುನಿಂತ ಅವನಿಗೆ ದೂರದರ್ಶಿಯಾದ ಅಕ್ಬರ್ ಬಾದಶಹನು ಆ ಕೂಡಲೇ ಅವಶ್ಯವಿದ್ದ ಸೈನ್ಯಸಹಾಯ ಪೂರೈಸಿದ. ಪ್ರತಿಯಾಗಿ, ಬುರ್ಹಾನನು ಪಟ್ಟವೇರಿದರೆ ಅಹಮ್ಮದ್ ನಗರಕ್ಕೆ ಈಗಾಗಲೇ ಸೇರಿಹೋದ ಬೇರಾರನ್ನು ಮೊಗಲರಿಗೆ ಒಪ್ಪಿಸಬೇಕು ಎಂಬ ಷರತ್ತು ಹಾಕಲು ಅಕ್ಬರನು ಮರೆಯಲಿಲ್ಲ.

ಮೊಗಲರ ಸೈನ್ಯ ಸಹಾಯದಿಂದ ಬುರ್ಹಾನನು ಮಗ ಇಸ್ಮಾಯಿಲನನ್ನು

ಸೋಲಿಸಿದ. ತಾನೆ ರಾಜನಾದ. ಯುದ್ಧದಲ್ಲಿ ಗಾಯಗೊಂಡ ಇಸ್ಮಾಯಿಲ
ಮಡಿದ. ಚಾಂದ್ ಬೀಬಿಯು ಈ ಯಾದವೀ ಯುದ್ಧಕ್ಕೆ ಮೂಕಸಾಕ್ಷಿಯಾ
ಬೇಕಾಯಿತು. ಆಕೆಗೆ ಅಹಮ್ಮದ್ ನಗರದ ಭದ್ರತೆ, ಪ್ರಜೆಗಳ ನೆಮ್ಮ
ಮುಖ್ಯವಾಗಿತ್ತು. ಈಗ ಅರಸನಾದ ಈ ಸೋದರನು ಇವುಗಳತ್ತ ಲಕ್ಷ
ತೋರುವುದಾಗಿ ಆತನಿಂದ ಆಶ್ವಾಸನೆ ಪಡೆದು ಆಕೆ ಬಿಜಾಪುರ
ಮರಳಿದಳು.

ಅಹಮ್ಮದ್ ನಗರದ ಅರಸನಾದ ಎರಡನೆಯ ಬುರ್ಹಾನ್ ಶಹನ
(1591–1595), ತನ್ನ ಪಾಲಿಗೆ ಬಂದ ರಾಜ್ಯವನ್ನು ಆಳುತ್ತ ನೆಮ್ಮದಿಯಿಂ
ಇರಬಹುದಾಗಿತ್ತು. ಆದರೆ ಅಷ್ಟಕ್ಕೆ ಸುಮ್ಮನಿರದೆ, ಪುನಃ ಸೊಲ್ಲಾಪು
ಕೋಟೆಯನ್ನು ನೆಪಮಾಡಿಕೊಂಡು ಬಿಜಾಪುರದೊಡನೆ ಯುದ್ಧ ಸಾರಿದ
ಆದರೆ ನಡೆದ ಯುದ್ಧದಲ್ಲಿ ಸೋತುಹೋದ. ಅವಮಾನ ಆಘಾತಗಳನ
ತಡೆಯಲಾರದೆ ಕೆಲವೇ ದಿನಗಳಲ್ಲಿ ಮಡಿದ. ಅದಾಗಲೇ ಅಹಮ್ಮದ್ ನಗರ
ಅಂತಃಕಲಹಗಳು, ಸರದಾರರ ಈರ್ಷೆ ಸ್ಪರ್ಧೆಗಳಿಂದ ಬೇಸತ್ತು, ಅವರ ಲಕ್ಷ
ಬೇರೆ ಕಡೆಗೆ ಹರಿಸಲು ಆತ ಯತ್ನಿಸಿ ಸೋತಿದ್ದ. ಬಿಜಾಪುರದೊಡ
ಸಂಘರ್ಷವೂ ಈ ಯತ್ನದ ಭಾಗವಾಗಿತ್ತು.

ಎರಡನೇ ಬುರ್ಹಾನ್ ನಿಜಾಮ್ ಶಹನ ನಂತರ ಅವನ ಮ
ಇಬ್ರಾಹಿಂನನ್ನೇ ಅರಸನೆಂದು ಘೋಷಿಸಲಾಯಿತು. ಹಿರಿಯರು ಅಥವ
ಅನುಭವಿಗಳ ಮಾರ್ಗದರ್ಶನವಿಲ್ಲದ ಅರಸನು, ಬಿಜಾಪುರ
ರಾಯಭಾರಿಯನ್ನು ಅವಮಾನ ಮಾಡಿ ಕಳಿಸಿದನಂತೆ! ಆ ಯುಗದ
ರಾಯಭಾರಿಯ ಅಥವಾ ವಿಶೇಷ ದೂತನ ಅವಮಾನ ಮಾಡುವದ
ಯುದ್ಧಕ್ಕೆ ಪರೋಕ್ಷ ಆಹ್ವಾನವೆಂದು ಭಾವಿಸಲಾಗುತ್ತಿತ್ತು.

ಸರಿ, ರೊಚ್ಚಿಗೆದ್ದ ಇಮ್ಮಡಿ ಇಬ್ರಾಹಿಂ ಆದಿಲ್ ಶಹನು ಸೈನ್ಯವನ
ಕಳಿಸಿದ. ಹೊಸ ಅರಸನಿಗೆ ಎಲ್ಲರೂ ಸಲಹೆ ಕೊಡುವವರೇ ಹೊರತ
ಸಮರ್ಥ ನಾಯಕತ್ವ ವಹಿಸಿ ಬಿಜಾಪುರದ ಸೈನ್ಯವನ್ನು ಎದುರಿಸಲು ಯಾರು
ಬರಲಿಲ್ಲ. ಹೀಗಾಗಿ, ತಾನೇ ಮುಂದಾಳತ್ವ ವಹಿಸಿದ ಯುದ್ಧದಲ್ಲಿ ಅಹಮ್ಮದ
ನಗರದ ಇಬ್ರಾಹಿಂನು ಕೊಲ್ಲಲ್ಪಟ್ಟ. ಅವನ ರಾಜ್ಯಭಾರ ಕೆಲವೇ ತಿಂಗಳ
ನಡೆಯಿತಷ್ಟೆ (1596).

ಪುನಃ ಅರಸೊತ್ತಿಗೆಗಾಗಿ ಅಹಮ್ಮದ್ ನಗರ ಗೊಂದಲದ ಗೂಡಾಯ್ತು
ಅಶಾಂತಿಗೆ ಅರಾಜಕತೆಯು ಸೇರಿಕೊಂಡಿತು. ಹೊಂಚುಹಾಕಿ ಕುಳಿತ ಸ್ವಾರ್ಥ

ಸರದಾರರೆಲ್ಲ ತಂತಮ್ಮ ಬೇಳೆ ಬೇಯಿಸಿಕೊಳ್ಳಲು ಸಿದ್ಧರಾದರು; ಪಟ್ಟಕ್ಕೇ ಕಣ್ಣು ಹಾಕಿದ ಐವರು 'ಮುತ್ಸದ್ದಿಗಳು' ಕಾಣಿಸಿಕೊಂಡರು.

1. ಹಿಂದೊಮ್ಮೆ ಮುರ್ತುಜಾಖಾನ ಆಳುವಿಕೆಯಲ್ಲಿ ಮಿಯಾ ಮಂಜು ಎಂಬ ಮಹಾತ್ವಾಕಾಂಕ್ಷಿ ಸರದಾರನಿದ್ದ. ಅವನನ್ನು ಮುರ್ತುಜಾಖಾನು ರಾಜ್ಯದಿಂದ ಗಡಿಪಾರು ಮಾಡಿದ್ದ. ಈಗ ಮಿಯಾ ಮಂಜು ಪ್ರತ್ಯಕ್ಷನಾದ. ತನ್ನೊಂದಿಗೆ ನಿಜಾಮ್ ಶಾಹಿ ವಂಶದ 'ಕುಡಿ' ಎಂದು ಎಳೆಯನೊಬ್ಬನನ್ನು ಕರೆತಂದಿದ್ದ! ಪಟ್ಟವೇರಿದವನು ಬಾಧ್ಯಸ್ಥರಾದವರನ್ನೆಲ್ಲ ಕೊಲೆಮಾಡಿ ಮುಗಿಸುವದು ಸಾಮಾನ್ಯವಾಗಿತ್ತು ಎಂಬುದನ್ನು ನೋಡಿದ್ದೇವೆ. ಈ ಎಳೆಯನೂ ಹುಸೇನ್ ನಿಜಾಮ್ ಶಹನ ಕಾಲದಲ್ಲಿ ತನ್ನ ಕೊಲೆ ತಪ್ಪಿಸಿಕೊಂಡು ಬಂಗಾಲಕ್ಕೆ ಓಡಿಹೋಗಿದ್ದ ಚಿಕ್ಕಪ್ಪನ ಮಗ ಅಂದರೆ ಮೊದಲನೆ ಬುರ್ಹಾನ್ ನಿಜಾಮ್ ಶಹನ ಮರಿಮಗನೆಂದು ಮಿಯಾ ಮಂಜು ಸಾರುತ್ತ ಆತನನ್ನು ಪಟ್ಟಕ್ಕೇರಿಸಲು ಬಂದ. ಈ ಎಳೆಯನ ಹೆಸರು ಅಹಮ್ಮದ್ ಶಹ.
2. ಮುರ್ತುಜಾ ಮತ್ತು ಚಾಂದ್ ಬೀಬಿಯ ಸೋದರನಾಗಿ ಕೆಲಕಾಲ ಅರಸನೂ ಆಗಿದ್ದ, ಇಬ್ರಾಹಿಮ್ಮನ ಎಳೆಯ ಮಗು ಬಹಾದುರ್ ಶಹ.
3. ಬದುಕಿ ಉಳಿದ ಚಾಂದ್ ಬೀಬಿಯ ಅಜ್ಜ ಮೊದಲನೇ ಬುರ್ಹಾನ್ ನಿಜಾಮ್ ಶಹಾನ (1509–1553) ಕೊನೆಯ ಮಗ ಈಗ ಹಣ್ಣು ಹಣ್ಣು ಮುದುಕನೂ, ಬುದ್ಧಿ ಭ್ರಮಣೆಯಿಂದ ಬಳಲುತ್ತಿದ್ದವನೂ ಆಗಿದ್ದ ಶಹ ಆಲಿ ಎಂಬಾತ.
4. ಇಕ್ಲಾಸ್ ಖಾನನೆಂಬ ಪ್ರಬಲ ಸರದಾರನು, ಮೋತಿಖಾನನೆಂಬ ಹುಡಗನನ್ನು ಎಲ್ಲಿಂದಲೋ ತಂದು ಅಹಮ್ಮದ್ ನಗರದಲ್ಲಿ ಸ್ಥಾಪಿಸಿ ಆ ಹುಡುಗನೂ ನಿಜಾಮ್ ಶಹನ ವಂಶದವನೇ ಎನ್ನುತ್ತ ಆತನನ್ನು ಅರಸನನ್ನಾಗಿಸಿ ತನ್ನ ಪ್ರತಿಷ್ಠೆ ಬೆಳೆಸಲು ಯತ್ನ ನಡೆಸಿದ್ದ.
5. ಅಹಮ್ಮದ್ ನಗರವನ್ನು ನುಂಗಲು ಎಂದಿನಿಂದಲೋ ಪ್ರಯತ್ನ ನಡೆಸಿದ್ದ ಅಕ್ಬರ್ ಬಾದಶಹ ಪಕ್ಕದ ಖಾನದೇಶದಲ್ಲೆ ಮೊಗಲರ ಅಧಿಕಾರಿಯನ್ನು ಇರಿಸಿದ್ದ.

ಇದು ನಿಜಕ್ಕೂ ಅಹಮ್ಮದ್ ನಗರಕ್ಕೆ ಸಂಕಟದ ಕಾಲವಾಗಿತ್ತು. ಕೆಲ ನಿಷ್ಠ ಹಿರಿಯ ಸರದಾರರು ಚಾಂದ್ ಬೀಬಿಗೆ ಕರೆಕಳಿಸಿದರು. ಈಗ ಸಾಕು ಮಗ ಇಬ್ರಾಹಿಂ ಸ್ವತಂತ್ರವಾಗಿ ಆಳುವಷ್ಟು ಪ್ರಬುದ್ಧನಾಗಿದ್ದ. ಹೀಗಾಗಿ, ಚಾಂದ್

ಬೀಬಿ ಆ ಕೂಡಲೇ ಅಹಮ್ಮದ್ ನಗರಕ್ಕೆ ಬಂದು ರೀಜಂಟ್ ಆಗಿ ಪರಿಸ್ಥಿತಿಯನ್ನು ನಿಭಾಯಿಸುವ ಹೊಣೆಹೊತ್ತಳು. ತಂದೆಯ ಸಿಂಹಾಸನ ಇತರರ ಪಾಲಾಗಲು ಆಕೆ ಬಿಟ್ಟಾಳೆಯೆ?

ಚಾಂದ್ ಬೀಬಿಯು ಮಿಯಾ ಮಂಜ ಕರೆತಂದ ಬಾಲಕನು ನಿಜಾಮ್ ಶಾಹಿ ವಂಶಸ್ಥನಲ್ಲವೆಂದು ಗೂಢಚಾರರನ್ನು ಬಂಗಾಲಕ್ಕೆ ಕಳಿಸಿ, ಪತ್ತೆ ಹಚ್ಚಿ ಬಹಿರಂಗಪಡಿಸಿದಳು. ಮೂರನೆಯವ ಬಾಧ್ಯಸ್ಥನಿದ್ದರೂ ಅವನನ್ನು ಬೆಂಬಲಿಸುತ್ತಿದ್ದ ಗುಂಪು ದುರ್ಬಲವಾಗಿತ್ತು. ಅಲ್ಲದೆ, ಅವನು ನೆನಪಿನ ಶಕ್ತಿ ಕಳೆದುಕೊಂಡಿದ್ದ. ಗಾದಿಯ ಹಕ್ಕನ್ನು ಸ್ಥಾಪಿಸಲು ಹವಣಿಸುತ್ತಿದ್ದ ನಾಲ್ಕನೆಯವನಾದ ಇಕ್ಲಾಸ್ ಖಾನನು ದೌಲತಾಬಾದದಲ್ಲಿ ಇದ್ದು ಸೈನ್ಯ ಸಂಗ್ರಹಣೆಯಲ್ಲಿ ತೊಡಗಿದ್ದ. ಅವನು ಅಹಮ್ಮದ್ ನಗರವನ್ನು ಪ್ರವೇಶಿಸದಂತೆ ನೋಡಿಕೊಳ್ಳಲಾಯಿತು. ಐದನೆಯವನಾದ ಮೊಗಲರ ಪ್ರತಿನಿಧಿಯು ಎಲ್ಲರಿಗಿಂತ ಪ್ರಬಲ ಶತ್ರುವಾಗಿದ್ದರಿಂದ, ಚಾಂದ್ ಬೀಬಿ ಆತನನ್ನು ಎದುರಿಸುವ ಸಿದ್ಧತೆ ನಡೆಸಿದಳು. ಅಂತಿಮವಾಗಿ, ತನ್ನ ಸೋದರ ಬುರ್ಹಾನ್ ಶಹನ ಮೊಮ್ಮಗ, ಬಹಾದುರ್ ಶಹ, ಎಳೆಯ ಮಗುವಾಗಿದ್ದರೂ ಪಟ್ಟಕ್ಕೆ ನಿಜವಾದ ಭಾದ್ಯಸ್ಥನಿದ್ದುದರಿಂದ ಅವನನ್ನು ಎತ್ತಿಹಿಡಿದಳು. ಸಭೆ ಕರೆದು ಸರದಾರರಲ್ಲಿ ಧೈರ್ಯ ತುಂಬಿ ಅವರೆಲ್ಲ ಒಮ್ಮನಸ್ಸಿನಿಂದ ಬಹಾದುರ್ ಶಹನಿಗೆ ಪಟ್ಟಗಟ್ಟುವಂತೆ ನೋಡಿಕೊಂಡಳು.

ಈ ಬೆಳವಣಿಗೆಯಿಂದ ತಾನು ಸರ್ವಾಧಿಕಾರಿಯಾಗಬಹುದು ಎಂದು ನಂಬಿದ್ದ ಮಿಯಾ ಮಂಜು ಹತಾಶನಾದ. ನೇರ ಅಕ್ಬರ್ ಬಾದಶಹನ ಓಲಗಕ್ಕೆ ಹೋಗಿ ಸಹಾಯ ಯಾಚಿಸಿದ. ಅವಕಾಶಕ್ಕಾಗಿ ಕಾಯುತ್ತಲೇ ಇದ್ದ ಅಕ್ಬರ್ ಬಾದಶಹನು ಗುಜರಾತ್ ಪ್ರದೇಶವನ್ನು ನೋಡಿಕೊಳ್ಳುತ್ತಿದ್ದ ಮಗ ಮುರಾದ್ ನೇತೃತ್ವದಲ್ಲಿ ದೊಡ್ಡ ಸೈನ್ಯವನ್ನು ಅಹಮ್ಮದ್ ನಗರಕ್ಕೆ ಮುತ್ತಿಗೆ ಹಾಕಲು ಕಳಿಸಿದ.

## ಅಹಮ್ಮದ್ ನಗರಕ್ಕೆ ಮುತ್ತಿಗೆ (1596)

ಇದು ಚಾಂದ್ ಬೀಬಿಗೆ ಅವಳ ಬದುಕಿನ ದೊಡ್ಡ ಪಂಥಾಹ್ವಾನವಾಗಿತ್ತು. ಅಹಮ್ಮದ್ ನಗರದ ಕೋಟೆ ಸಿಂಹಾಸನಗಳ ಮೇಲೆ ಆಕ್ರಮಣ! ಜೊತೆಗೆ, ಮುತ್ತಿಗೆ ಬಹುಕಾಲ ನಡೆಯಬಹುದಾದ ಸಂಭವವಿತ್ತು. ಈ ಅವಧಿಯಲ್ಲಿ ನಿರರ್ಥಕವಾಗಿ ನಾಗರಿಕ ಪ್ರಜೆಗಳ, ಹಾಗೂ ಅಕ್ಕ ಪಕ್ಕದ ಗ್ರಾಮಗಳ ರೈತಾಪಿ ಜನರ ಕೊಲೆ ಸುಲಿಗೆಗಳು ನಡೆಯುವದನ್ನು ತಪ್ಪಿಸಬೇಕಾಗಿತ್ತು.



ಮೊಗಲ್ ಚಕ್ರವರ್ತಿ ಅಕ್ಬರ್

ಚಾಂದ್ ಬೀಬಿ ಬಿಜಾಪುರದ ಅರಸು ಇಬ್ರಾಹಿಂ ಹಾಗೂ ಗೋಲ್ಕೊಂಡದ ಕುತುಬ್ ಶಹರಲ್ಲಿ ಸಹಾಯ ಕೇಳಿದಳು. ಮೊದಲಿನಿಂದಲೂ ಚಾಂದ್ ಬೀಬಿ ಕುರಿತು ಹೆಚ್ಚಿನ ಗೌರವ-ಪ್ರೀತಿಗಳನ್ನು ತಳೆದಿದ್ದ ಇಬ್ರಾಹಿಂ ಆದಿಲ್ ಶಹನು ತಡಮಾಡದೆ ಮೂವತ್ತು ಸಹಸ್ರ ಸೈನಿಕರನ್ನು ಕಳಿಸಿದನಂತೆ! ಗೋಲ್ಕೊಂಡದಿಂದಲೂ ಏಳುಸಾವಿರ ಸೈನಿಕರ ಪಡೆ ಬಂದಿತು. ಹೆಚ್ಚಿನ ಸರದಾರರೂ, ಜನತೆಯೂ ಚಾಂದ್ ಬೀಬಿಯ ಬೆಂಬಲಕ್ಕಿದ್ದರು. ಕೆಲವೇ ಬಂಡೆದ್ದ ಸರದಾರರನ್ನು ಗಡೀಪಾರು ಮಾಡಲಾಯಿತು.

ಮೊಗಲ್ ಯುವರಾಜ ಮುರಾದನ ಬೆಂಬಲಕ್ಕೆ ಅಕ್ಬರನ ಬಲಗೈ ಬಂಟನೆಂದೇ ಪ್ರಸಿದ್ಧನಾದ ಅಬ್ದುಲ್ ರಹೀಮ್ ಖಾನ್-ಈ-ಖಾನಾನ್ ಎಂಬ ಪರಾಕ್ರಮಶಾಲಿ ದಂಡನಾಯಕನಿದ್ದ. ಆತನು ಚಾಂದ್ ಬೀಬಿಯ ತಾಯಿ ಖುಂಝಾ ಹುಮಾಯೂನ್‌ಳ ಖುವಿನ್ಲೊ ವಂಶಕ್ಕೆ ಸೇರಿದವನೆ ಆಗಿದ್ದ. ಆದರೆ ಪ್ರಭುತ್ವದ ಮಹಾತ್ವಾಕಾಂಕ್ಷೆಗೆ ರಕ್ತ ಸಂಬಂಧ, ಗಾಢ ಸ್ನೇಹಗಳು ಅಡ್ಡ ಬರುವುದಿಲ್ಲ; ಧರ್ಮವೂ ಅಡ್ಡ ಬರುವುದಿಲ್ಲ. ಶಾಹೀ ಅರಸರೆಲ್ಲರೂ ರಕ್ತ ಸಂಬಂಧಿಗಳೇ ಆಗಿದ್ದರೂ ಚಾಂದ್ ಬೀಬಿಯು ಅವರಿಂದ ಎದುರಿಸಬೇಕಾಗಿ ಬಂದ ಸಂಕಟ ಪ್ರಸಂಗಗಳು ಹಲವಾರು.

ಮುರಾದನು ತನ್ನದೇ ದೊಡ್ಡ ಸೈನ್ಯವಿದ್ದರೂ ಇತರ ಚಿಕ್ಕ ದೊಡ್ಡ ಅರಸರ ಸೈನ್ಯದ ಬೆಂಬಲವನ್ನು ಪಡೆಯಲು ಮರೆಯಲಿಲ್ಲ. ಮೊಗಲರ ಕಡೆಯಿಂದ ಅರವತ್ತು ಸಾವಿರದಷ್ಟು ಬೃಹತ್ ಸೈನ್ಯ, ಅಹಮ್ಮದ್ ನಗರದ ಕೋಟೆಯನ್ನು ಸುತ್ತುವರಿಯಿತು. ರಕ್ಕಸ-ತಂಗಡಿ ಯುದ್ಧದ ಬಳಿಕ ಇಷ್ಟೊಂದು ದೊಡ್ಡ ಪ್ರಮಾಣದ ಸೈನ್ಯ ಸೇರಿದ ಸಂದರ್ಭ ಇರಲಿಲ್ಲವೆಂದು ದಖ್ಖನಿನ ಇತಿಹಾಸಕಾರರು ಹೇಳುತ್ತಾರೆ.

ಯುದ್ಧ ಪ್ರಾರಂಭವಾಯಿತು. ತಾನಿದ್ದ ಸ್ಥಳದಿಂದಲೇ ಖಾನ್-ಈ-ಖಾನಾನ್‌ನು ಐದು ಸುರಂಗಗಳನ್ನು ಕೋಟೆಯ ಅಂಚಿನವರೆಗೂ ತೋಡಿಸಿ



ಅಹಮ್ಮದ್ ನಗರದ ಕೋಟೆ

ಮದ್ದು ಗುಂಡು ಕಲ್ಲುಗಳಿಂದ ತುಂಬಿಸಿದ. ಚಾಂದ್ ಬೀಬಿಯ ಗುಪ್ತದಳದವರು ಅವನ್ನು ಪತ್ತೆಹಚ್ಚಿದರು. ಕತ್ತಲೆ ಆವರಿಸಿ ವೈರಿ ಸೈನಿಕರು ಬಿಡದಿಗೆ ಮರಳಿದಾಗ ಕೋಟೆಯ ಒಳಗಡೆಯಿಂದ ಎರಡು ಸ್ಥಳಗಳ ಸುರಂಗಗಳನ್ನು ಸದ್ದಿಲ್ಲದೆ ಖಾಲಿಮಾಡುವಂತೆ ಚಾಂದ್ ಬೀಬಿ ನಿಗಾವಹಿಸಿದಳು. ಒಂದಕ್ಕೊಂದು ಸಮೀಪವಿದ್ದ ಇನ್ನೂ ಮೂರು ಸುರಂಗಗಳನ್ನು ಖಾಲಿ ಮಾಡಬೇಕಾಗಿತ್ತು. ಅಷ್ಟರಲ್ಲಿ ಅದು ಶತ್ರುಗಳ ಗಮನಕ್ಕೆ ಬಂದು, ಮುರಾದನ ಆಜ್ಞೆಯಂತೆ ಮೂರು ಸುರಂಗಗಳನ್ನು ಏಕಕಾಲಕ್ಕೆ ಸ್ಫೋಟಿಸಲಾಯಿತು. ಭಯಂಕರ ಸದ್ದಿನೊಂದಿಗೆ ಅಹಮ್ಮದ್ ನಗರದ ಕೋಟೆ ಬಿರುಕುಬಿಟ್ಟಿತು. ಬಳಿಕ ಕಡು ಕತ್ತಲೆಯ ಘೋರ ಮೌನ! ಅಷ್ಟರಲ್ಲಿ ಚಿಲಕತ್ತು ಧರಿಸಿ ಕಠಾರಿ ಹಿಡಿದು ಕುದುರೆಯೇರಿ ಮುಖ ಮರೆಮಾಡಿದ ಸ್ತ್ರೀಯೋರ್ವಳು ಸೈನಿಕರನ್ನು ಹುರಿದುಂಬಿಸುತ್ತ ಬಿರುಕುಬಿಟ್ಟ ಸ್ಥಳವನ್ನು ತಲಪಿದ್ದಳು! ಕೋಟೆಯ ರಕ್ಷಣಾ ಗೋಡೆಯ ದುರಸ್ತಿ ಕಾರ್ಯ ಸದ್ದಿಲ್ಲದೆ ನಡೆಯಿತು. ಕಲ್ಲು ಮಣ್ಣುಗಳ ಜೊತೆಗೆ ಮರಣವನ್ನಪ್ಪಿದ ಸೈನಿಕರ ಹೆಣಗಳನ್ನೂ ಒಟ್ಟಿ ಗೋಡೆಕಟ್ಟಿ ಬಿರುಕು ಸರಿಪಡಿಸಲಾಯಿತು! ರಾತ್ರಿಯೆಲ್ಲ ಕುದುರೆಯಿಂದ ಇಳಿಯದೇ ಬಿರುಕು ಬಿಟ್ಟ ಸ್ಥಳದಿಂದ ಸರಿಯದೇ ಚಾಂದ್ ಬೀಬಿ, ದುರಸ್ತಿ ಕೆಲಸದತ್ತ ಗಮನ ಹರಿಸಿದಳು. ಗೋಡೆಯ ಕಂದಕದಾಚೆ ದೂರದ ಬಿಡದಿಯಲ್ಲಿ ದಣಿದ ಮೊಗಲ ಸೈನಿಕರನ್ನೆಲ್ಲ ನಿದ್ರೆ ಆವರಿಸಿತ್ತು.

ಮರುದಿನ ಬೆಳಿಗ್ಗೆ ಜುಮ್ಮಾ ಪ್ರಾರ್ಥನೆ ಮುಗಿಸಿ ಸಶಸ್ತ್ರರಾಗಿ ಬಿರುಕುಬಿಟ್ಟ

ಕೋಟೆಯನ್ನು ಆಕ್ರಮಿಸಲು ಬಂದ ಮೊಗಲರ ಪಡೆಗೆ ಅಚ್ಚರಿ ಕಾದಿತ್ತು! ಮೊದಲಿಗಿಂತ ಎತ್ತರದ ಭದ್ರವಾದ ಗೋಡೆ ಎದ್ದುನಿಂತಿತ್ತು! ಅವರೆಲ್ಲ ಸಮೀಪಿಸುತ್ತಿದ್ದಂತೆ ಕೋಟೆಯ ಬುರುಜುಗಳಲ್ಲಿ ಜೋಡಿಸಿದ್ದ ತೋಫುಗಳು ಗರ್ಜಿಸಲಾ ರಂಭಿಸಿದವು! ಅರಮನೆಯಲ್ಲಿ ಲಭ್ಯವಿದ್ದ ಯಾವತ್ತು ಧಾತು ಸಂಗ್ರಹವನ್ನು ಸ್ವಂತ ಆಭರಣಗಳು ಸೇರಿದಂತೆ ಮದ್ದುಗುಂಡಗಳ ತಯಾರಿಕೆಗೆ ಬಳಸುವಂತೆ ಚಾಂದ್ ಬೀಬಿ ಆಜ್ಞೆಯಿತ್ತಿದ್ದಳು. ತಾಮ್ರದ ನಾಣ್ಯಗಳನ್ನು ತೋಫಿನಲ್ಲಿ ಹಾಕಿ ಅವು ಕಾದಾಗ ಹಾರಿಸುವ ಪ್ರಯೋಗದಿಂದ ತುಂಬ ಪ್ರಾಣಹಾನಿಯಾಯಿತು.

ಈಗ ಮೊಗಲ್ ಸೈನ್ಯ ಹಿಮ್ಮೆಟ್ಟಿತು. ಮುತ್ತಿಗೆ ಮುಂದುವರಿದರೂ ಅದಾಗಲೇ ಮೂರು ತಿಂಗಳು ದಾಟಿದ್ದವು. ಮುರಾದನ ಮದ್ದುಗುಂಡುಗಳ ಸಂಗ್ರಹ ಮುಗಿಯುತ್ತ ಬಂದಿತ್ತು. ಆಹಾರದ ಕೊರತೆ ಆರಂಭವಾಗುವದರಲ್ಲಿತ್ತು. ಬಿಜಾಪುರ, ಗೋಲ್ಕೊಂಡದ ಪಡೆಗಳು ಇವೆರಡರ ಪೂರೈಕೆ ಶತ್ರು ಸೈನ್ಯಕ್ಕೆ ಆಗದಂತೆ, ದೂರದಿಂದಲೇ ನಿಯಂತ್ರಿಸುತ್ತಿದ್ದವು. ಬೇರೆ ಉಪಾಯವಿಲ್ಲದೆ ಮುರಾದನು ಒಪ್ಪಂದಕ್ಕೆ ಸಿದ್ಧನಾದ. ತಮ್ಮ ಬೇರಾರದ ಕೋಟೆಯ ಬೇಡಿಕೆಯನ್ನು ಪೂರೈಸಿದರೆ, ಮುತ್ತಿಗೆಯನ್ನು ಎತ್ತುವದಾಗಿ ಸಂದೇಶವನ್ನು ಕಳಿಸಿದ.

ಚಾಂದ್ ಬೀಬಿ ಇದಕ್ಕೆ ಒಪ್ಪದೇ ಹೋದಲ್ಲಿ ಮೊಗಲರು ಮುತ್ತಿಗೆಯನ್ನು ಮುಂದುವರಿಸುತ್ತಿದ್ದರು. ಕಾಯ್ದಿಟ್ಟ ಪಡೆಯು ಬರುವ ತನಕ, ಸಾಧ್ಯವಿದ್ದರೆ, ತನ್ನ ಮಿತ್ರ ಪಕ್ಷ ಒಡೆದು, ಸ್ವಾರ್ಥ ಸಾಧಿಸಿಕೊಳ್ಳುತ್ತಿದ್ದರು. ಅಥವಾ ಹಿಂದಿರುಗುವಾಗ ಬಿಜಾಪುರ, ಗೋಲ್ಕೊಂಡ ಸೈನ್ಯದೊಡನೆ ಕಾದಾಡುತ್ತ ನಿಷ್ಕಾರಣವಾಗಿ ಪ್ರಾಣಹಾನಿ ಮಾಡುತ್ತಿದ್ದರು. ಇತ್ತ ತನ್ನ ಮದ್ದುಗುಂಡು ಮತ್ತು ಆಹಾರ ಸಂಗ್ರಹವೂ ಕಡಿಮೆಯಾಗುತ್ತಿದೆ. ಅವ್ಯಾಹತವಾಗಿ ಕಾದಾಡಿ ತನ್ನ ಸೈನಿಕರೂ ದಣಿದಿದ್ದಾರೆ. ಇವನ್ನೆಲ್ಲ ಯೋಚಿಸಿ ಇದ್ದುದರಲ್ಲಿ ಈ ಸಂಧಿ ವಿಧಾನದ ಮುಖ್ಯ ಮುದ್ದೆಯಾದ ಬೇರಾರನ್ನು ಮೊಗಲರಿಗೆ ಬಿಟ್ಟುಕೊಡುವದು ಸೂಕ್ತವೆಂದುಕೊಂಡಳು. ಬಾಲಕ ಸುಲ್ತಾನ ಬಹಾದುರ್ ನಿಜಾಮ್ ಶಹನ ಹೆಸರಿನಲ್ಲಿ ಸಂಧಿಗೆ ಸಹಿಮಾಡಿದಳು.

ತಂತಮ್ಮ ಆಶ್ರಯದಾತರ ಬಗ್ಗೆ ಅತಿಯಾಗಿ ಸ್ತುತಿಸುವ ಅಹಮ್ಮದ್ ನಗರ ಮತ್ತು ಬಿಜಾಪುರದ ಆಸ್ಥಾನ ಇತಿಹಾಸಕಾರರು, ಈ ಯುದ್ಧದಲ್ಲಿ ಅದರ ಬಗ್ಗೆ ಏನೂ ಹೇಳಿಕೊಳ್ಳುವುದಿಲ್ಲ! ಅರ್ಥಾತ್ ಅವರ ಪಾತ್ರ ಗೌಣವಾಗಿತ್ತು



ಎಂದೇ ಊಹಿಸಬೇಕು. ಆದರೆ ಅವರೂ, ಮೊಗಲ್ ಚರಿತ್ರಕಾರರೂ ಸೇರಿದಂತೆ ಚಾಂದ್ ಬೀಬಿಯು ಸಾಧಿಸಿದ ಕೆಚ್ಚೆದೆಯ ಕೋಟೆಯ ರಕ್ಷಣೆಯನ್ನು ಹೊಗಳುತ್ತಾರೆ. ಅಕ್ಬರ್ ಬಾದಶಹನೇ ಚಾಂದ್ ಬೀಬಿ 'ಚಾಂದ್ ಸುಲ್ತಾನಾ' ಎಂಬ ಬಿರುದನ್ನು ಕೊಡಮಾಡಿದ. ಇದು ತುಂಬ ಮಹತ್ವದ್ದಾಗಿದೆ. ಏಕೆಂದರೆ ಅಕ್ಬರನು ಈ ಶಾಹಿ ಸುಲ್ತಾನರನ್ನು ಸ್ವತಂ ಅರಸರೆಂದು (ಸುಲ್ತಾನ್) ಪರಿಗಣಿಸಿಯೇ ಇರಲಿಲ್ಲ! ಮೊಗಲ ದಾಖಲಾತಿಗಳಲ್ಲಿ ಆಯಾ ಶಾಹಿಗಳೊಡನೆ ಆತ ನಡೆಸಿದ ಪತ್ರವ್ಯವಹಾರದಲ್ಲಿ ಅವರನ್ನು ಕೇವಲ 'ಖಾನ್' ಎಂದೇ ಉಲ್ಲೇಖಿಸಲಾಗಿದೆ. ಆತನ ದೃಷ್ಟಿಯಲ್ಲಿ ಅವರು ಪಾಳೆಯಗಾರರಿಗಿಂತ ಕೊಂಚ ಮೇಲು! ಐವರು ಶಾಹೀ ಅರಸರುಗ ಮನೆತನದ ಓರ್ವ ಮಹಿಳೆ 'ಸುಲ್ತಾನಾ' ಗೌರವಕ್ಕೆ ಪಾತ್ರಳಾದಳು. ಮೊಗಲ ರಾಜ ಕುಟುಂಬದ ಯಾವ ಕನ್ಯೆಯೂ ಚಾಂದ್ ಬೀಬಿಯ ಉನ್ನತ, ಅನ

ಸಾಧನೆಯ ಒಂದಂಶವನ್ನೂ ತೋರ್ಪಡಿಸಲಿಲ್ಲವೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಮಧ್ಯಯುಗದ ಮುಸ್ಲಿಂ ಜಗತ್ತಿನಲ್ಲಿ ಇದು ಅತಿ ವಿರಳ ಘಟನೆ. ದಕ್ಷಿಣ ಭಾರತದಲ್ಲಿ ಬಲಾಢ್ಯರಾದ ಮೊಗಲರೊಡನೆ ಹೋರಾಡಿದ ವೀರಾಂಗನೆ ಚಾಂದ್ ಬೀಬಿ ಮಾತ್ರ!

ಹಿಂದೆ, ಬೇರಾರನ್ನು ಮತ್ತೆ ಮತ್ತೆ ಕೇಳಿ, ಕೊನೆಗೊಮ್ಮೆ ಪಡೆದದ್ದರಿಂದ ಅಕ್ಬರನಿಗೆ ಸಂತೋಷ ಆಗಲೇ ಇಲ್ಲ! ಮುತ್ತಿಗೆ ಹಿಂಪಡೆದ ವಿಚಾರದಿಂದ ಕೊಂಚ ಕ್ರುದ್ಧನೂ ಆಗಿದ್ದ. ಅದು ಅನಿರೀಕ್ಷಿತವಾಗಿತ್ತು. ಅಹಮ್ಮದ್ ನಗರವನ್ನು ಮುಗಿಸಿಬಿಡುವ ಮಂತ್ರಾಲೋಚನೆ ಪ್ರಾರಂಭಿಸಿದ. ಆದರೆ ಮುತ್ತಿಗೆ ಹಾಕಿದ್ದ ಮುರಾದನು ಮದ್ಯ ವ್ಯಸನಿಯಾಗಿದ್ದ. ಕಾಯಿಲೆ ಬಿದ್ದು ತನ್ನ ಮೂವತ್ಮೂರನೆ ವಯಸ್ಸಿಗೇ ನಿಧನ ಹೊಂದಿದ. ಈ ಘಟನೆ ಚಕ್ರವರ್ತಿಯನ್ನು ಗಾಸಿಗೊಳಿಸಿತು. ಸೈನ್ಯವನ್ನು ವಾಪಸ್ ಕರೆಸಿಕೊಂಡ; ಕೆಲಕಾಲ ಯುದ್ಧ ಸ್ಥಗಿತವಾಯಿತು.

ಅಹಮ್ಮದ್ ನಗರದ ಅಂತಃಕಲಹಗಳು ಮುಂದರಿದವು. ಚಿಕ್ಕ ವಯಸ್ಸಿನ ಬಹಾದೂರ್ ಶಹ ಮತ್ತು ಐವತ್ತು ವರ್ಷ ಸಮೀಪಿಸುತ್ತಿದ್ದ ರೀಜಂಟ್ ಚಾಂದ್ ಬೀಬಿ ಇಬ್ಬರಿಗೂ ಒಳಸಂಚುಗಳಿಂದ ತಮ್ಮ ಹತ್ಯೆ ತಪ್ಪಿಸಿಕೊಳ್ಳುವುದೇ ಸಾಹಸವಾಯಿತು. ಅಹಮದ್ ನಗರದ ಅಸ್ತಿತ್ವಕ್ಕೆ ಹೋರಾಡಿದ ಚಾಂದ್‌ಳ ದೇಶಪ್ರೇಮವಾಗಲಿ, ಜನತೆಯ ಕುರಿತಾದ ಅನುಕಂಪವಾಗಲಿ ಸ್ವಾರ್ಥಿ ಸರದಾರರ ಮನಸ್ಸನ್ನು ತಟ್ಟಲೇ ಇಲ್ಲ.

ಈಗ ಅಹಮ್ಮದ್ ನಗರ ಕುಬ್ಜವಾಗಿತ್ತು. ಸೈನ್ಯದ ಬಲ ಕುಂದಿತ್ತು. ದ್ರೋಹಕ್ಕೆ ಕೊನೆಯೆಂಬುದೇ ಇರಲಿಲ್ಲ. ಆಯುಷ್ಯವಿಡೀ ಇವನ್ನೆಲ್ಲ ಧೈರ್ಯವಾಗಿ ಎದುರಿಸಿದ್ದವಳಿಗೆ ಮೊದಲಿನ ಹುಮ್ಮಸ್ಸು ಉಳಿದಿರಲಿಲ್ಲ. ಮತ್ತೆ ಮೊಗಲರು ಬಂದೇ ಬರುತ್ತಾರೆ; ಅವರು ಅತ್ಯಂತ ಪ್ರಬಲರಾಗುತ್ತ ನಡೆದಿದ್ದಾರೆ; ಈ ಬಾರಿ ಅವರನ್ನು ಎದುರಿಸುವ ತ್ರಾಣ ತನ್ನಲ್ಲಿ ಉಳಿದಿಲ್ಲವೆಂದು ಚಾಂದ್ ಬೀಬಿಗೆ ಅನಿಸಲಾರಂಭಿಸಿತು. ಅನಿಶ್ಚಿತ ಭವಿಷ್ಯವು ಈ ಅನನ್ಯ ಅರಸಿಯನ್ನು ಕಾಡಲಾರಂಭಿಸಿತು.

9

# ವೀರಚೇತನದ ಅಂತ್ಯ

ಮೂರು ವರ್ಷಗಳ ಬಳಿಕ ಮೊಗಲರ ಸೈ
ಮತ್ತಷ್ಟು ಸುಸಜ್ಜಿತವೂ ಸುಧಾರಿತವೂ ಆಗಿ
ಶಸ್ತ್ರಾಸ್ತ್ರಗಳೊಡನೆ ಮತ್ತೆ ಲಗ್ಗೆ ಇಟ್ಟಿತು (1599).
ಬಾರಿಯ ನೇತೃತ್ವವನ್ನು ಅಕ್ಬರನ ಇನ್ನೊಬ್ಬ ಮ
ದಾನಿಯಲ್ ವಹಿಸಿದ್ದ. ಆತನೊಡನೆ ಖಾನ್-ಈ
ಖಾನಾನ್ ಇದ್ದೇ ಇದ್ದ. ಆತ ದಾನಿಯಲ್‌ಗೆ ಹೆಣ್ಣುಕೊ
ಮಾವ ಬೇರೆ! ಒಡ್ಡೋಲಗದಲ್ಲಿ ಅಳಿಯನಿಗೆ ಉತ್ತ
ಹೆಸರನ್ನು ಕೊಡಿಸುವ ಅವಕಾಶವನ್ನು ಹು
ಹೋಗಗೊಡುವನೆ? ಈಗಾಗಲೇ ಚಾಂದ್ ಬೀಬಿಯ ಮತ
ಅವಳ ಸೈನಿಕರ ಕೆಚ್ಚೆದೆಯ ಕಾಳಗದ ಅನುಭವ ಅವನಿಗಿತ್ತು
ಆದ್ದರಿಂದ ನೇರ ಕಾಳಗಕ್ಕೆ ಇಳಿಯುವ ಗೋಜಿ
ಹೋಗಲಿಲ್ಲ. ನಿಧಾನವಾಗಿ ಕೋಟೆಯ ಆಯಕಟ್ಟಿ
ಸ್ಥಳವನ್ನು ಗುರುತಿಸಿಕೊಂಡು ಒಂದೇ ಕಡೆಯಿಂ
ಕೋಟೆಯ ಗೋಡೆಯನ್ನು ಒಡೆಯುವತ್ತ ಲಕ್ಷ್ಯವನ
ಕೇಂದ್ರೀಕರಿಸಿದ.

ಈ ಬಾರಿಯೂ ಚಾಂದ್ ಬೀಬಿಯು ಸಾಕುಮ
ಬಿಜಾಪುರದ ಇಬ್ರಾಹಿಂ ಆದಿಲ್ ಶಹ ಮತ

ಗೋಲ್ಕೊಂಡದ ಕುತುಬ್ ಶಹರತ್ತ ಸಹಾಯಕ್ಕಾಗಿ ಯಾಚಿಸಿದಳು. ಆದರೆ ಅವರಿಬ್ಬರೂ ಸ್ಪಂದಿಸಲಿಲ್ಲ. ಈಗಾಗಲೇ ಮೊಗಲರ 'ವಿದೇಶಿ ನೀತಿ'ಯ (ಆಗಿನ ಯುಗದಲ್ಲಿ ಪ್ರತಿ ಚಿಕ್ಕ ದೊಡ್ಡ ರಾಜ್ಯವು ಮೊಗಲರ ಆಧಿಪತ್ಯ ಅಥವಾ ಸಾರ್ವಭೌಮತ್ವಕ್ಕೆ ಒಳಪಡದ ಪ್ರದೇಶವು 'ದೇಶ' ಎನಿಸಿಕೊಳ್ಳುತ್ತಿತ್ತು) ಪಕ್ಕಾ ಅನುಭವ ಅವರಿಗೆ ಆಗಿತ್ತು. ಈ ಮೊದಲ, ಅಹಮ್ಮದ್ ನಗರದ ಮೇಲಿನ ಮುತ್ತಿಗೆಯ ಬಳಿಕ ಇನ್ನಷ್ಟು ಪ್ರಬಲರಾಗಿರುವ ಮೊಗಲರು, ಒಂದೊಂದಾಗಿ ತಮ್ಮ ಶಾಹೀ ರಾಜ್ಯಗಳನ್ನು ಮುಗಿಸಿ ಬಿಡುತ್ತಾರೆ ಎಂಬ ಕಠೋರ ಸತ್ಯದ ಅರಿವು ಅವರಿಬ್ಬರಿಗೂ ಚೆನ್ನಾಗಿಯೇ ಆಗಿತ್ತು! ಈಗ ಅಹಮ್ಮದ್ ನಗರಕ್ಕೆ ಸೈನ್ಯದ ಸಹಾಯವಿತ್ತರೆ ಅದರೊಂದಿಗೆ ತಮ್ಮ ಅಳಿಗಾಲ ಕಟ್ಟಿಟ್ಟದ್ದೇ! ತಟಸ್ಥರಾಗಿ ಉಳಿದರೆ ಸಾಕಷ್ಟು ಕಾಲ ವೈರಿಯನ್ನು ದೂರ ಇಡಬಹುದು, ಆ ಬಳಿಕ ಕಪ್ಪಕೊಡುವ ನೆವದಿಂದ ಯುದ್ಧ ತಪ್ಪಿಸಬಹುದು ಎಂದುಕೊಂಡರೋ ಏನೋ, ಇಬ್ರಾಹಿಂ ಆದಿಲ್ ಶಹ ಮತ್ತು ಕುತುಬ್ ಶಹ!

ಚಾಂದ್ ಬೀಬಿಯ ಬಿನ್ನಹಕ್ಕೆ ಉತ್ತರ ಬರಲೇ ಇಲ್ಲ! ಈಗ ಚಾಂದ್ ಸುಲ್ತಾನಾ ಹತಾಶಳಾದಳು. ಆದರೂ ತನ್ನ ಸ್ವಂತದ, ರಾಜ್ಯದ ಶಕ್ತಿಯನ್ನೆಲ್ಲ ಕ್ರೋಡೀಕರಿಸಿ ಯುದ್ಧಕ್ಕೆ ಸಿದ್ಧಳಾದಳು. ಎಲ್ಲ ಸೈನಿಕರ ತುಕಡಿಗಳನ್ನು ಸ್ವತಃ ಪರಿಶೀಲಿಸಿ ಮಾತನಾಡಿಸಿ ಹುರಿದುಂಬಿಸಿದಳು. ಎಂದಿನಂತೆ ಸೈನಿಕ ವೇಷಧರಿಸಿ, ಮುಖವನ್ನು ಮಾತ್ರ ಪಾರದರ್ಶಕ ಬಟ್ಟೆಯಿಂದ ಮುಚ್ಚಿ, ಕುದುರೆಯೇರಿ ರಣರಂಗಕ್ಕೆ ಬಂದಳು. ಪ್ರಾಣವನ್ನೇ ಪಣಕ್ಕಿಟ್ಟು ಹೋರಾಡುವ ಶಪಥ ತೊಟ್ಟಳು.

ಒಂದಲ್ಲ ಎರಡಲ್ಲ ನಾಲ್ಕು ತಿಂಗಳ ಕಾಲ ಮುತ್ತಿಗೆ ಮುಂದುವರಿಯಿತು. ದಕ್ಷಿಣ ಭಾರತದಲ್ಲೇ ಅತ್ಯುತ್ತಮ ತೋಫುಗಳ ತಯಾರಿಕೆಗೆ ಹೆಸರಾಗಿದ್ದ ಅಹಮ್ಮದ್ ನಗರದವು ಈ ಬಾರಿ ಸಂಖ್ಯಾ ಬಲದಲ್ಲಿ ಮೊಗಲರಿಗೆ ಮೀರಿಸದಾದವು. ಸತತವಾದ ಮದ್ದುಗುಂಡುಗಳ ಸುರಿಮಳೆಯಿಂದ ಗುರುತಿಸಿದ ಆಯಕಟ್ಟಿನ ಭಾಗ ಕೊನೆಗೊಮ್ಮೆ ಕುಸಿಯಿತು. ಕಿಶೋರ ಬಾದಶಹನಾಗಿದ್ದ ಬಹಾದೂರ್ ಶಹನು ಹೊರಗೇ ಇದ್ದು ಸೈನಿಕರನ್ನು ಹುರಿದುಂಬಿಸುತ್ತಲೇ ಇದ್ದ. ಒಳಹೊಕ್ಕ ಮೊಗಲ ಸೈನಿಕರು ಆತನನ್ನು ಉಪಾಯವಾಗಿ ಬಂಧಿಸಿ, ಖಾನ್-ಈ-ಖಾನಾನನ ಬಳಿ ಒಯ್ದರು. ಕೋಟೆಯ ಅರಮನೆಯ ಒಳಗಡೆಯಿದ್ದ ಚಾಂದ್ ಸುಲ್ತಾನಾ ತನ್ನ ಜೀವನದ ಅಂತಿಮ ನಿರ್ಧಾರವನ್ನು ಕೈಗೊಂಡಿದ್ದಳು.

ಚಾಂದ್ ಬೀಬಿಯ ಕೊನೆ ಹೇಗಾಯಿತೆಂಬುದರ ಬಗ್ಗೆ ಸಮಕಾಲೀನ ಇತಿಹಾಸಕಾರರಲ್ಲಿ ಒಮ್ಮತವಿಲ್ಲ. ಬಿಜಾಪುರದ ಆಸ್ಥಾನ ಚರಿತ್ರಕಾರ ಫರಿಶ್ತಾ ಪ್ರಕಾರ, ಸೋಲು ನಿಶ್ಚಿತವೆಂದು ಗೊತ್ತಾದಾಗ, ಚಾಂದ್ ಬೀಬಿ ತನ್ನ ಅತ್ಯಂತ ಆತ್ಮೀಯನೆಂದು ಗುರುತಿಸಲ್ಪಟ್ಟ ಖೋಜಾ ಸರದಾರ ಬೇತಾ ಖಾನ್ ಎಂಬಾತನಿಗೆ ತಾನು ಸ್ವಂತ ಇಚ್ಛೆಯಿಂದ ಸದ್ಯಕ್ಕೆ ಅಹಮ್ಮದ್ ನಗರ ಕೋಟೆಯನ್ನು ಮೊಗಲರಿಗೆ ಬಿಟ್ಟುಕೊಡುತ್ತೇನೆ, ಬಹಾದೂರ್ ಶಹನೊಂದಿಗೆ ಜುನ್ನರದ ಕೋಟೆಗೆ ಹೊರಟುಹೋಗುತ್ತೇನೆ, ಒಪ್ಪಂದದ ಬಳಿಕ, ಪರಿಸ್ಥಿತಿ ತಿಳಿಯಾದ ಬಳಿಕ, ಸಮಯ ಸಾಧಿಸಿ ಹಿಂದಿರುಗಿ ಬರುತ್ತೇನೆ ಎಂದು ಹೇಳಿದ್ದಳಂತೆ. ಆದರೆ ಬೇತಾ ಖಾನನು ವಿಶ್ವಾಸದ್ರೋಹವೆಸಗಿ ಬಹಿರಂಗವಾಗಿ ಈ ವಿಚಾರವನ್ನು ಸಿಕ್ಕ ಸಿಕ್ಕವರಿಗೆ ಸಾರುತ್ತ ಹೋದನಂತೆ. ತಮಗೆಲ್ಲ ದ್ರೋಹಮಾಡಿದ ರಾಣಿಗೆ ಶಿಕ್ಷೆಯಾಗಲೇಬೇಕು ಎಂದು ರೊಚ್ಚಿಗೆದ್ದ ಜನ, ಅರಮನೆಗೆ ಮುತ್ತಿಗೆಹಾಕಿ ಚಾಂದ್ ಬೀಬಿಯನ್ನು ಕೊಂದರಂತೆ!

ಆದರೆ ಅಹಮ್ಮದ್ ನಗರದ ಇತಿಹಾಸಕಾರರು ಬರೆದದ್ದು ಬೇರೆಯೇ! ಅವರ ಪ್ರಕಾರ ಚಾಂದ್ ಬೀಬಿ ಶತ್ರುಗಳ ಕೈಗೆ ಬೀಳುವದನ್ನು ತಪ್ಪಿಸಿಕೊಳ್ಳಲು ಅರಮನೆಯಲ್ಲಿದ್ದ ಮಥರಿ ಬಾವಡಿ ಎಂಬ ಬಾವಿಯಲ್ಲಿ ಉಗ್ರವಾದ ರಾಸಾಯನಿಕಗಳನ್ನು ತುಂಬಿಸಿ, ಸೈನಿಕರು ಮುನ್ನುಗ್ಗುತ್ತಿದ್ದಂತೆ ತನ್ನ ಹಲವು ನಿಕಟವರ್ತಿಗಳೊಂದಿಗೆ ಬಾವಿಯಲ್ಲಿ ಹಾರಿದಾಗ, ಕ್ಷಣಾರ್ಧದಲ್ಲಿ ಅವರೆಲ್ಲರ ದೇಹಗಳು ಸುಟ್ಟು ಗುರುತು ಹಿಡಿಯಲಾರದಷ್ಟು ವಿದ್ರೂಪವಾದವಂತೆ.

ಚಾಂದ್ ಬೀಬಿಯ ವ್ಯಕ್ತಿತ್ವದ ಪರಿಚಯ ಮಾಡಿಕೊಂಡವರಿಗೆ ಎರಡನೆಯ ಕಥಾನಕವೇ ನಿಜವಾಗಿರಲು ಸಾಕು, ಅನಿಸುತ್ತದೆ. ಅವಳ ಸೌಂದರ್ಯ ಪ್ರಸಿದ್ಧವಿತ್ತು. ಇಳಿಯವಸ್ಸಿನಲ್ಲೂ ಆಕೆ ಲೋಕೋತ್ತರ ಸುಂದರಿಯಾಗಿದ್ದಳು. ಮಧ್ಯಯುಗದ ಸೈನಿಕರ ಕ್ರೌರ್ಯವು ಮುಗಿಲುಮುಟ್ಟಿತ್ತು. ಅರಮನೆಗೆ ನುಗ್ಗಿದ ಕ್ರೂರಿಗಳಿಗೆ, ರಾಣಿಯ ಅಸಾಮಾನ್ಯ ಯೋಗ್ಯತೆಯಾಗಲಿ, ಸ್ಥಾನಮಾನದ್ದಾಗಲಿ ಕಲ್ಪನೆ ಇರಲಿಕ್ಕುಂಟೆ? ಪೈಶಾಚಿಕ ಅತ್ಯಾಚಾರ ತೀರ ಸಾಮಾನ್ಯವಾಗಿತ್ತು. ಅಂಥ ಘೋರ ಘಟನೆಯನ್ನು ತಪ್ಪಿಸಲು ಚಾಂದ್ ಸುಲ್ತಾನಾ ಶರೀರತ್ಯಾಗದ ಅಂತಿಮ ಕ್ರಮ ಕೈಗೊಂಡಿರಲು ಸಾಕು ಎಂದು ಆ ಬಳಿಕದ ಸೈಯದ್ ಜಾಫರ್ ಮತ್ತು ಕಾಫಿ ಖಾನ್‌ರೆಂಬ ಪ್ರಸಿದ್ಧ ಇತಿಹಾಸಕಾರರ ಅಭಿಪ್ರಾಯವನ್ನು ಒಪ್ಪಿಕೊಳ್ಳುವದೇ ಸರಿ ಎನಿಸುತ್ತದೆ. ಏನಿಲ್ಲೆಂದರೆ ಅಹಮ್ಮದ್ ನಗರದವರು ಕಂಡ ಕೇಳಿದ ಪ್ರತ್ಯಕ್ಷ

ಘಟನೆಯಾಗಿತ್ತಲ್ಲ! ಮೊಗಲರ ಆಕ್ರಮಣದ ಯುದ್ಧ ಕ್ಷೇತ್ರದಿಂದ ತುಂಬ ದೂರದಲ್ಲಿದ್ದು ಬೆಚ್ಚಗಿನ ರಾಜಾಶ್ರಯದಲ್ಲಿ ಬರೆದ ಬಿಜಾಪುರದ ವೃತ್ತ ಸತ್ಯಕ್ಕೆ ದೂರವಿರಬಹುದು! ಮಥರಿ ಬಾವಡಿಯಿಂದ ವಿದ್ರೂಪಗೊಂಡ ಶವಗಳನ್ನೆಲ್ಲ ಎತ್ತಿಸಿ ಚಾಂದ್ ಬೀಬಿಯದನ್ನು ಪ್ರಯತ್ನ ಪೂರ್ವಕ ಗುರುತಿಸಿ ರಾಜಯೋಗ್ಯ ಸಂಸ್ಕಾರ ಮಾಡಿದೆಡೆ ಕಟ್ಟಿದ ಸಮಾಧಿಯ ಅವಶೇಷಗಳು ಅಹಮ್ಮದ್ ನಗರದಲ್ಲಿ ಉಳಿದುಕೊಂಡಿವೆ; ರಾಜಮನೆತನದಲ್ಲಿ ಜನ್ಮವೆತ್ತಿಯೂ ಅದರ ಸುಖಕ್ಕಿಂತ ನೂರುಪಟ್ಟು ದುಃಖಗಳನ್ನೆಲ್ಲ ಎದುರಿಸಿ ತಾಯ್ನಾಡನ್ನು ಇನ್ನಿಲ್ಲದಂತೆ ಪ್ರೀತಿಸಿ, ಕೊನೆಗೆ ಅದು ಕೈಬಿಡುವುದು ಖಚಿತವಾದಾಗ ಶರಣಾಗತಿಗಿಂತ ಸಾವು ಮೇಲೆಂದು ನಿರ್ಧರಿಸಿ ಅದರಂತೆ ಇಲ್ಲವಾದ ವೀರಚೇತನವೊಂದರ ಕೊರಗನ್ನು ವಿಶ್ವಕ್ಕೆ ಸಾರುತ್ತ ನಿಂತಿವೆ.

10

# ಸಾಕು ತಾಯ್ತಂದೆಯರ ಸಾರ್ಥಕ ಮಗ ಎರಡನೇ ಇಬ್ರಾಹಿಮ್ ಆದಿಲ್ ಶಹ

ಅಲಿ ಮತ್ತು ಚಾಂದ್ ಬೀಬಿ ದಂಪತಿಗಳ ಹಲವಾರು ಆಸಕ್ತಿಗಳಿಗೆ ಮೂರ್ತರೂಪ ಕೊಟ್ಟು, ಅವರ ಕನಸನ್ನು ನನಸಾಗಿಸಿದ ಎರಡನೆಯ ಇಬ್ರಾಹಿಮನ ಆಳ್ವಿಕೆ (1580–1627) ಆದಿಲ್‌ಶಾಹಿ ಯುಗದ ಸುವರ್ಣಕಾಲವೂ ಆಗಿತ್ತು. ಅಲಿಯ ಆಕಸ್ಮಿಕ ಹತೆಯಿಂದ ಕೇವಲ ಒಂಭತ್ತನೆ ವರ್ಷಕ್ಕೆ ಪಟ್ಟವೇರಿದ ಬಳಿಕ 8–9 ವರ್ಷಗಳ ಕಾಲ ಚಾಂದ್ ಬೀಬಿ ರೀಜಂಟ್ ಆದದ್ದನ್ನು ನೋಡಿದ್ದೇವೆ. ಧರ್ಮ ಸಹಿಷ್ಣುತೆ, ಕಲಾಪ್ರೇಮ ರೂಢಿಸಿಕೊಂಡುದರೊಂದಿಗೆ ಭಾರತೀಯ ಪುರಾಣೇತಿಹಾಸಗಳ ಅಧ್ಯಯನವೂ ಇಬ್ರಾಹಿಮ್‌ನ ಶಿಕ್ಷಣದಲ್ಲಿ ಸೇರ್ಪಡೆಯಾಗಿತ್ತು. ಅವನ ಗುರುಗಳಲ್ಲಿ ರುಕ್ಮಾಂಗದ ಪಂಡಿತ ಸಂಸ್ಕೃತ ಫಾರಸಿ ಭಾಷೆಗಳಂತೆ ಸಂಗೀತ ಶಾಸ್ತ್ರದಲ್ಲೂ ಪರಿಣತನಿದ್ದನಂತೆ; ಭಕ್ತಿಯ ತಲ್ಲೀನತೆಯಲ್ಲಿ ಚೆನ್ನಾಗಿ ಹಾಡುತ್ತಲೂ ಇದ್ದಾಗ, ಮರೆಯಲ್ಲಿದ್ದು, ಬಾಲಕ ಇಬ್ರಾಹಿಮನು ಕೇಳಿ ಆನಂದಿಸುತ್ತಿದ್ದನಂತೆ. ಅವನಿಂದಲೇ ಇಬ್ರಾಹಿಮನಿಗೆ ಸರಸ್ವತಿ ಆರಾಧನೆಯ ದೀಕ್ಷೆ ಸಿಕ್ಕಿತು. ಅರಮನೆಯ ಆವರಣದಲ್ಲೆ ಇಬ್ರಾಹಿಮನು 'ಸರಸ್ವತಿ ಮಂದಿರ' ಕಟ್ಟಿಸಿದ.

ತನ್ನ ಪ್ರಸಿದ್ಧ ಕೃತಿಯಾದ 'ಕಿತಾಬ್-ಎ-ನವರಸ್'ದ ಪ್ರಾರಂಭವನ್ನು ಸರಸ್ವತಿ ಸ್ತುತಿಯಿಂದಲೇ ಪ್ರಾರಂಭಿಸಿದ್ದಾನೆ. ಸರಸ್ವತಿ ಮಂದಿರದಲ್ಲಿ ಪ್ರತಿದಿನ ಹಿಂದೂ ಸಂಗೀತಗಾರರೊಡನೆ ಸೇರಿಕೊಂಡು ಸರಸ್ವತಿಯನ್ನು ಆರಾಧಿಸುತ್ತಿದ್ದನು. ಈ ಗ್ರಂಥದಲ್ಲಿ 1) ಹಿಂದೂ ದೇವತೆಗಳ ಸ್ತುತಿ, 2) ಸಂತ ಬಂದೇ ನವಾಜರ ಸುತ್ತಿ, 3) ಅವನ ಬಗ್ಗೆ, ಅವನ ತಂಬೂರಿ, ಆನೆ, ಏಳಂತಸ್ತಿನ ಅವನ ಮನೆ, ಪತ್ನಿ, ತಾಯಿ ಮೊದಲಾದವುಗಳ ಬಗ್ಗೆ ಉಲ್ಲೇಖ ಇವೆ. ಆತನ ಭಾವಚಿತ್ರಗಳಿಂದ ಆತನೊಬ್ಬ ಸ್ಫುರದ್ರೂಪಿಯಾಗಿದ್ದು ಓರಣವಾದ ಬಟ್ಟೆ ಧರಿಸುತ್ತಿದ್ದ ಎಂದು ತಿಳಿಯುತ್ತದೆ. ಜೊತೆಗೆ ತನ್ನ ಪ್ರೀತಿಯ ತಂಬೂರಿ ಹಿಡಿದ ಚಿತ್ರವೂ ಇದೆ. ಈ ಕೃತಿಯಿಂದ ಆಗ ಪ್ರಚಲಿತವಿದ್ದ ರಾಗಗಳ ಮತ್ತು ವಾದ್ಯಗಳ ಪರಿಚಯವಾಗುತ್ತದೆ.



'ಕಿತಾಬ್-ಎ-ನವರಸ್' ಪುಸ್ತಕ

ಅವನು ಪರ್ಶಿಯನ್ ಮತ್ತಿತರರಿಗೆ ಭಾರತೀಯ ಸೌಂದರ್ಯಶಾಸ್ತ್ರ ಹಾಗೂ ನವರಸಗಳನ್ನು ಪರಿಚಯಿಸಲು ಕಿತಾಬ್-ಎ-ನವರಸ್ ಬರೆದನೆಂದು, ಆಸ್ಥಾನದ ಕವಿ ಬರೆದಿದ್ದಾನೆ. ಎಲ್ಲರಿಗೂ ಪರಿಚಿತವಿದ್ದ ಶೃಂಗಾರ, ವೀರ, ಬೀಭತ್ಸ, ರುದ್ರ, ಭಯಾನಕ, ಹಾಸ್ಯ, ಕರುಣ, ಅದ್ಭುತ ಮತ್ತು ಶಾಂತಿ ರಸಗಳನ್ನೇ ವಿವರಿಸಿದರೂ ಶೃಂಗಾರಕ್ಕೆ ಒತ್ತುಕೊಟ್ಟಿದ್ದಾನೆ. ಅದರಂತೆ ದೇವ ದೇವತೆಗಳಲ್ಲಿ ಆತನಿಗೆ ಅತ್ಯಂತ ಪ್ರಿಯರಾದವರು ಗಣಪತಿ ಮತ್ತು ಸರಸ್ವತಿ; ಬೇರೆ ಬೇರೆ ರಾಗಗಳಲ್ಲಿ ಅವರನ್ನು ಸ್ತುತಿಸಿದ್ದಾನೆ.

'ಸಂಗೀತದ ರಸ-ಭಾವಗಳನ್ನು ಆಸ್ವಾದಿಸಲು ಭಾಷೆ ಮತಪಂಥದ ಭೇದವಿಲ್ಲ!' ಹೀಗೆಂದು ಆತನು ಸಾರಿದ ವಾಕ್ಯ ಸಾರ್ವಕಾಲಿಕವಾಗಿದೆ; ಆತನ ಮನೋವೈಶ್ಯಾಲಕ್ಕೆ ಸಾಕ್ಷಿಯಾಗಿದೆ.

'ಭಾಕಾ ನ್ಯಾರೀ ನ್ಯಾರೀ ಭಾವ ಏಕ ಕಹಾ ತರುಕ ಕಡಾ ಬರಹಾಮನ್'. ಭಾಷೆಗಳು ಬೇರೆ ಬೇರೆ ಆದರೇನು? ಅವುಗಳ ಭಾವ ಒಂದೇ ಆಗಿದೆ. ಈ ಸಂದೇಶವನ್ನು ಕೊಡಮಾಡುವುದರ ಜೊತೆಗೆ ತಾನು ವಿದ್ಯೆಯ ಸಂಗೀತದ ಗುರುಗಳ ಸೇವೆಮಾಡಿದ್ದೇನೆ, ಏಕಾಗ್ರ ಮನಸ್ಸಿನಿಂದ ಜಪಮಾಡಿದ್ದೇನೆ ಎಂದು ನಿವೇದಿಸಿಕೊಂಡಿದ್ದಾನೆ.

ದಖನಿ ಭಾಷೆಯ ಈ ಕೃತಿ ಪರ್ಶಿಯನ್ ಲಿಪಿಯಲ್ಲಿದೆ. ಹೂಬಳ್ಳಿಗಳ ಅಂಚುಗಳುಳ್ಳ ಪುಟದ ಮೇಲೆ ಅಂದವಾಗಿ ಬರೆದ ಅಕ್ಷರಗಳಿಗೆ ಬೇರೆ ಬೇರೆ ಬಣ್ಣಗಳನ್ನು, ಸುವರ್ಣರೇಕುಗಳನ್ನು ತುಂಬಲಾಗಿದೆ. ಕೆಲವೇ ಅಳಿದುಳಿದ ಪ್ರತಿಗಳು ಪ್ರಪಂಚದ ಪ್ರಸಿದ್ಧ ಮ್ಯೂಜಿಯಂಗಳಲ್ಲಿ ಇವೆ.

ಎರಡನೆಯ ಇಬ್ರಾಹಿಮನು ಕೇವಲ ಸಂಗೀತ ಪ್ರಿಯನೆಂದು ಭಾವಿಸಬಾರದು. ಒಳ್ಳೆಯ ಯೋಧನೂ, ರಾಜನೀತಿ ಧುರೀಣನೂ ಆಗಿದ್ದ. ಇತರ ಶಾಹೀ ಅರಸರನ್ನು ನಂಬಿಸಿಯೋ, ಬೆದರಿಸಿಯೋ ಹದ್ದುಬಸ್ತಿನಲ್ಲಿ ಇಟ್ಟಿದ್ದ. ತಾನು ತುಂಬ ಗೌರವಿಸುತ್ತಿದ್ದ ಚಾಂದ್ ಬೀಬಿಯ ಸಹಾಯಕ್ಕಾಗಿ ಹಲವು ಬಾರಿ ಧಾವಿಸಿದ. ಆದರೆ ಕೊನೆಯಲ್ಲಿ ತನ್ನ ರಾಜ್ಯಕ್ಕೇ ಮೊಗಲರಿಂದ ಗಂಡಾಂತರ ಕಟ್ಟಿಟ್ಟದ್ದು ಎಂದು ಸ್ಪಷ್ಟವಾದಾಗ ಆತ ತಟಸ್ಥನಾಗಿ ಇರಲೇಬೇಕಾಯಿತು.

ತನ್ನ ಕನಸಿಗೆ ಮೂರ್ತರೂಪಕೊಟ್ಟು 'ನವರಸಪುರ್' ಎಂಬ ಉಪನಗರ ಕಟ್ಟಿಸಿ ಸಂಗೀತ ಸಾಧನೆಗೆ ಮೀಸಲಿರಿಸಿದ್ದ. ದೇಶದ ಪ್ರಖ್ಯಾತ ಗಾಯಕರು, ವಾದ್ಯವಾದನ ಕುಶಲರು, ನೃತ್ಯ-ನಾಟಕಕಾರರು ಪ್ರತಿ ಗುರುವಾರ ಅಲ್ಲಿ ಸೇರುತ್ತಿದ್ದರು. ಗಾಯನದಲ್ಲಿ ಚಿಕ್ಕಂದಿನಿಂದಲೂ ನೈಪುಣ್ಯ ಹೊಂದಿದ್ದ ಸುಲ್ತಾನನ ಮುಂದೆ ತಮ್ಮ ಕಲೆಯ ಸಾಧನೆ ಪ್ರದರ್ಶಿಸುವುದು ಅವರೆಲ್ಲರ ಕನಸಾಗಿತ್ತು. ಅವರಲ್ಲಿ ಪರಿಣತರ ಎದುರಿಗೆ ಅರಸನು ಸ್ವತಃ ಹಾಡುತ್ತಿದ್ದನಂತೆ. ಒಳ್ಳೆಯ ಕಲಾವಿದರಿಗೆ ಜಾಗೀರು, ಇನಾಮು ದೊರೆತರೆ, ಹೊರಗಿನಿಂದ ಬಂದವರೆಲ್ಲರಿಗೆ ವಸತಿ ಸೌಕರ್ಯ, ಬಕ್ಷೀಸುಗಳ ವ್ಯವಸ್ಥೆಯಿತ್ತು. ಬಕ್ಷೀಸು ಬಂಗಾರದ 'ಹೊನ್ನು' -ಅಂದಿನ ನವರಸ್ ನಾಣ್ಯವಾಗಿತ್ತು.

ಅಕ್ಬರ್ ಬಾದಶಹನು ತನ್ನದೇ 'ದೀನ್-ಎ-ಇಲಾಹಿ' ಧರ್ಮದ ಹೆಸರಿನಲ್ಲಿ ಸರ್ವಧರ್ಮ ಸಹಿಷ್ಣುತೆ ಸಾಧಿಸಲು ಯತ್ನಿಸಿದ್ದು ಇತಿಹಾಸ ಪ್ರಸಿದ್ಧವಿದೆ. ಇಬ್ರಾಹಿಮ್ ಆದಿಲ್ ಶಹನು ಜಗದ್ಗುರು ಬಾದಶಹನೆಂದು ಬಿರುದು ತಳೆದಿದ್ದ. ಆ ಕಾಲದ ಪರ್ಶಿಯನ್, ಮರಾಠೀ ಕೃತಿಗಳಲ್ಲೇ

ಜಗದ್ಗುರು ಬಾದಶಹನೆಂದೇ ಉಲ್ಲೇಖಿಸಲಾಗಿದೆ. ಇಬ್ರಾಹಿಮನು ಅಕ್ಬರನ ರಾಯಭಾರಿಯಾಗಿದ್ದು ಅಸದ್ ಬೇಗನೊಂದಿಗೆ ಕಳಿಸಿದ ಕೆಲವು ಉಡುಗೊರೆ ವಸ್ತುಗಳು ಹೀಗಿದ್ದವು.

ಒಂಬತ್ತು ಸಾಧಾರಣ ಹೊನ್ನು ಹಾಗೂ ಲ್ಯಾರೀ ಎಂಬ ನಾಣ್ಯಗಳೊಂದಿಗೆ ಎರಡು ಸಾವಿರ ಸಾಲಂಕೃತ ಲಿಪಿಯ ಪುಸ್ತಕಗಳನ್ನು ಕಳಿಸಿ, ತನ್ನ ನವರಸಗಳ ಮತ್ತು ಪುಸ್ತಕಗಳ ಪ್ರೇಮವನ್ನು ಮೆರೆದಿದ್ದ. ಆತನ ನವರಸ್ ವಿಶೇಷ ನಾಣ್ಯದ ಮೇಲೆ ಪರ್ಶಿಯನ್ ಲಿಪಿಯಲ್ಲಿ 'ನೌರಸ್ ಮುಹರ್ ಆದಿಲ್ ಜಗದ್ಗುರು ದಾದ್ ಇಲಾಹಿ' ಎಂದು ಕೆತ್ತಲಾಗಿತ್ತಂತೆ. 'ದಾದ್ ಇಲಾಹಿ' ಎಂದರೆ 'ಈಶ್ವರ ದತ್ತ' ಎಂಬ ಅರ್ಥವಂತೆ. ಈ 'ದಾದ್ ಇಲಾಹಿ'ಯ ಉಡುಗೊರೆ, ದೀನ್-ಎ- ಇಲಾಹಿಯ ಬಾದಶಹನಿಗೆ ಹೇಗೆ ಕಂಡಿತು ಎಂದು ಚರಿತ್ರೆಯಲ್ಲಿ ಉಲ್ಲೇಖವಿಲ್ಲ!

ಇಂಥ ಸಾಹಿತ್ಯ ಸಂಗೀತ ಕಲಾಪ್ರೇಮಿ, ಭಾವೈಕ್ಯತೆಯಲ್ಲಿ ಮನಸಾ ನಂಬಿಕೆ ಇಟ್ಟಿದ್ದ. ಅರಸನ ಅಂತ್ಯ ದಯನೀಯವಾಗಿ ಪರಿಣಮಿಸಿತು. ಚಾಂದ್ ಬೀಬಿಯ ಅಂತ್ಯದ ಬಳಿಕ ಅಹಮ್ಮದ್ ನಗರದಲ್ಲಿ ಮಲಿಕ್ ಅಂಬರತ್ ಎಂಬ ಹಬಶೀ ಸರದಾರ ಬಲಿಷ್ಠನಾಗಿದ್ದ. ಮೊದಮೊದಲಿಗೆ ಇಬ್ರಾಹಿಮನೂ ಗೋಲ್ಕೊಂಡದ ಕುತುಬ್ ಶಹನೂ ಆತನೊಂದಿಗೆ ಸ್ನೇಹದಿಂದ ಇದ್ದರು. ಆದರೆ ಮೊಗಲರ ದಾಳಿಗೆ ಮತ್ತೆ ಮತ್ತೆ ಈಡಾಗುತ್ತಿದ್ದ ದಿನಗಳಲ್ಲಿ ತನಗೆ ಉಳಿಗಾಲವಿಲ್ಲವೆಂದು ಮನಗಂಡ ಇಬ್ರಾಹಿಮ್ ಮೊಗಲರೊಂದಿಗೆ ಸ್ನೇಹವನ್ನು ಹವಣಿಸಿದ. ಮಲಿಕ್ ಅಂಬರತನಿಗೂ ಅದನ್ನೇ ಸೂಚಿಸಿದರೂ ಅವನು ಒಪ್ಪಲಿಲ್ಲ. ಅಷ್ಟೇ ಅಲ್ಲ, ಕುತುಬ್ ಶಹನ ಮೇಲೆ ದಾಳಿಮಾಡಿ, ಕಪ್ಪವನ್ನು ವಸೂಲಿಮಾಡಿದ. ಗೋಲ್ಕೊಂಡ ಬಿಜಾಪುರದ ಸಖ್ಯ ಮುರಿದಿದ್ದ ಬಾದಶಹ ಅಕ್ಬರನು ನಿಧನನಾಗಿ (1605), ಜಹಾಂಗೀರನು ಪಟ್ಟವೇರಿದ್ದ. ಅವನು ಮತ್ತೆ ತನ್ನ ಮಗ ಪರವೀಝ್‌ನನ್ನು ದಖ್ಖನದ ದಂಡಯಾತ್ರೆಗೆ ಕಳಿಸಿದ. ಇದರಲ್ಲಿ ಇಬ್ರಾಹಿಮ್ ಆದಿಲ್ ಶಹನ ಸಹಾಯ ಕೇಳಿದ್ದರಿಂದ ಆತನು ಒಪ್ಪಿಕೊಂಡು ದೊಡ್ಡ ಸೈನ್ಯವನ್ನೇ ಕಳಿಸಿದ. ಮೊಗಲರಿಗೆ ದೊಡ್ಡ ತಲೆನೋವಾಗಿ ಪರಿಣಮಿಸಿದ್ದ ಮಲಿಕ್ ಅಂಬರತ್‌ನನ್ನು ಅಡಿಗಿಸುವದು ಜಹಾಂಗೀರನ ಉದ್ದೇಶವಾಗಿತ್ತು.

ಆದರೆ ಈ ಜಂಟೀ ಸೈನ್ಯವನ್ನು ಮಲಿಕ್ ಅಂಬರತ್ ಸೋಲಿಸಿದ್ದೇ ಅಲ್ಲದೇ ರೊಚ್ಚಿನಿಂದ ವಿಜಾಪುರದ ಪ್ರದೇಶವನ್ನು ಹಾಳುಗೆಡವಿದ. ಸುಂದರ

ಉಪನಗರವಾಗಿದ್ದ ನವರಸ್‌ಪುರವನ್ನು ಪೂರ್ತಿ ಧ್ವಂಸಮಾಡಿದ. ಸೈನ್ಯವನ್ನೆಲ್ಲ ಮೊಗಲರ ಸಹಾಯಕ್ಕೆ ಕಳಿಸಿದ ಇಬ್ರಾಹಿಮ್ ಆದಿಲ್ ಶಹನು ಅಸಹಾಯಕನಾಗಿ ಮೂಕ ಪ್ರೇಕ್ಷಕನಾಗಬೇಕಾಯಿತು. ಕೆಲ ಸಮಯದ ಬಳಿಕ ಮಲಿಕ್ ಅಂಬರತ್ ಮತ್ತು ಒಂದು ವರ್ಷದ ಬಳಿಕ ಇಬ್ರಾಹಿಮ್ ಆದಿಲ್ ಶಹರೂ ನಿಧನರಾದರು.

ಅರಸರಲ್ಲಿ ಪರಾಕ್ರಮಿಗಳೆಂದು ಹೆಸರಾದವರು ಧೈರ್ಯ ಸಾಹಸಕ್ಕೆ ಪ್ರಸಿದ್ಧರಾಗುತ್ತಾರೆ. ಆದರೆ ಇಬ್ರಾಹಿಮನಂತಹ ಸಂಸ್ಕೃತಿ ಪ್ರಿಯರು ನಾಡಿಗೆ ಶಾಶ್ವತವಾದ ಕಾಣಿಕೆಗಳನ್ನು ನೀಡುತ್ತಾರೆ. ಇಬ್ರಾಹಿಮನಂಥವರು ಕಟ್ಟಡಗಳು, ಚಿತ್ರಗಳು, ಗ್ರಂಥಗಳು, ಸಂಗೀತ, ಭಾಷೆ ಮುಶೈರಾಗಳಂತಹ ಜನಪ್ರಿಯ ಪರಂಪರೆಯ ಪೋಷಕರಾಗಿ ಅವನ್ನು ಮುಂದಿನ ಪೀಳಿಗೆಯವರಿಗೆ ಬಿಟ್ಟುಹೋಗುತ್ತಾರೆ. ಭಾರತೀಯ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಭಾವೈಕ್ಯತೆಯನ್ನು ಮೆರೆದ ಮುಸ್ಲಿಂ ಅರಸರಲ್ಲಿ ಇಬ್ರಾಹಿಮನು ಅಗ್ರಪಂಕ್ತಿಯಲ್ಲಿ ಬರುತ್ತಾನೆ. ಭಾರತೀಯ ಭಾಷೆಯಾದ ದಖ್ಖನಿಯಲ್ಲಿ (ಫಾರಸಿ ಬದಲಾಗಿ) ತನ್ನ ಕೃತಿಯನ್ನು ಬರೆದ. ಸಂಗೀತ ಸಾಹಿತ್ಯ ಕಲೆಗಳಿಗೆಲ್ಲ ದಖ್ಖನಿ ಮೆರುಗು ಬರುವಂತೆ ನೋಡಿಕೊಂಡ. ಬೇರೆ ಬೇರೆ ದೇಶಗಳಿಂದ ಸೂಫಿಸಂತರು, ತತ್ವಜ್ಞಾನಿಗಳು, ವಾಸ್ತು ಪರಿಣತರು, ಬರಹಗಾರರು ಬಿಜಾಪುರದಲ್ಲಿ ನೆಲೆಗೊಳ್ಳುವಂತೆ ಮಾಡಿದ. ಆತನ ಆಸ್ಥಾನದಲ್ಲಿದ್ದ ಕವಿ, ಲೇಖಕರು, ಚರಿತ್ರಕಾರರಿಂದಲೇ ದಖ್ಖನದ ಚರಿತ್ರೆಯನ್ನು ತಕ್ಕಮಟ್ಟಿಗೆ ಸರಿಯಾಗಿ ತಿಳಿದುಕೊಳ್ಳಲು ಸಾಧ್ಯವಾಗಿದೆ.

ಚಾಂದ್ ಬೀಬಿಗೆ ಕೊನೆಯ ಕಾಳಗದಲ್ಲಿ ಮಾತ್ರ ಇಬ್ರಾಹಿಮನಿಗೆ ಸೈನ್ಯ ಸಹಾಯ ಒದಗಿಸಲಾಗಲಿಲ್ಲ. ಅದಕ್ಕೆ ಸ್ವರಾಜ್ಯ ರಕ್ಷಣೆಯೇ ಮುಖ್ಯವಾದದ್ದೇ ಬಲವಾದ ಕಾರಣವಾಗಿತ್ತು. ಆದರೆ ತನ್ನ ಸಾಕು ತಾಯಿ, ಚಾಂದ್ ಬೀಬಿಯ ಕುರಿತಾದ ಆತನ ಮಮತೆ-ಗೌರವಗಳು ಆದರ್ಶಪ್ರಾಯವಾಗಿದ್ದವು. ಪರ್ಶಿಯನ್ ಭಾಷೆಯಲ್ಲಿ ಆತನು ಚಾಂದ್ ಬೀಬಿಗೆ ಸಲ್ಲಿಸಿದ ಕವನಾಂಜಲಿ, ಆಕೆಯ ಬಗ್ಗೆ ಅವನಿಗಿದ್ದ ಪ್ರೀತಿ-ಶ್ರದ್ಧೆಗಳ ನಿದರ್ಶನವಾಗಿದೆ.

# 11

# ಅಂದಿನ ಬಿಜಾಪುರ; ಚಾಂದ್ ಬೀಬಿ ಹಾಗೂ ಇತರರ ಕೊಡುಗೆ

ಕ್ರಿ. ಶ. ಹದಿನಾರನೆಯ ಶತಮಾನದಲ್ಲಿ ಭಾರತದ ಅಸಂಖ್ಯ ದೊಡ್ಡ ಚಿಕ್ಕ ಸಂಸ್ಥಾನಗಳಿದ್ದವು. ಅವೆಲ್ಲ ಚಿಕ್ಕ ಚಿಕ್ಕ ದೇಶಗಳಂತೆ ಸ್ವತಂತ್ರ ಕಾರಭಾರ ನಡೆಸುತ್ತ ಬಲಿಷ್ಠ ಸಾಮ್ರಾಟರಿಗೆ ಕಪ್ಪಕಾಣಿಕೆ ಕೊಟ್ಟೋ, ಸೈನ್ಯಸಹಾಯ ಒದಗಿಸುತ್ತಲೋ, ತಮ್ಮ ಅಸ್ತಿತ್ವ ಕಾದುಕೊಳ್ಳುತ್ತಿದ್ದವು. ಮೊಗಲ್ ಸಾಮ್ರಾಜ್ಯವು ಆ ಶತಮಾನದ ಅಂತ್ಯದಲ್ಲಿ ದಖ್ಖನದತ್ತ ಮುನ್ನಡೆಯುತ್ತ ಕಪ್ಪಕಾಣಿಕೆ ಕೊಡಲೊಪ್ಪದ ಸಂಸ್ಥಾನಗಳನ್ನು ಗೆಲ್ಲುತ್ತ ಹೋಯಿತು. ಅಹಮ್ಮದ್ ನಗರದ ಪತನ ಅಕ್ಬರ್ ಬಾದಶಹನಿಂದಾಗಿ 1599ರಲ್ಲಿ ಪ್ರಾರಂಭವಾಗಿ ಔರಂಗಜೇಬನು 1686ರಲ್ಲಿ ಬಿಜಾಪುರವನ್ನು ಗೆಲ್ಲುವ ತನಕ ಅದರ ಪಯಣ ಮುಂದರಿಯಿತು. ಆತನಕ ದಖ್ಖನದ ಶಾಹೀ ರಾಜ್ಯಗಳು ತಮ್ಮದೇ ವಿಧದಲ್ಲಿ ಭರತಖಂಡದ ಸಂಸ್ಕೃತಿಗೆ ಕೊಡುಗೆ ನೀಡಿವೆ. ಆದರೆ ಬಿಜಾಪುರದ ಆದಿಲ್‌ಶಾಹಿಗಳು ಮೊಗಲ್ ದಾಳಿಯ ಮುನ್ನ ಮತ್ತು ನಿಕಟಕಾಲದಲ್ಲೂ ಸಂಸ್ಕೃತಿಯ ರೂಪಗಳಾದ ಅನೇಕ ಕಲಾಪ್ರಕಾರಗಳಲ್ಲಿ ವಿಶೇಷ ಪ್ರೋತ್ಸಾಹವಿತ್ತು, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಸರುವಾಸಿ

ಆಗಿದ್ದಾರೆ. 1480ರಿಂದ 1626ರವರೆಗೆ ಆಳಿದ ಆದಿಲ್‌ಶಾಹಿ ರಾಜ್ಯದ
ಮೊದಲನೆ ಆಲಿ ಆದಿಲ್ ಶಾಹ, ಚಾಂದ್ ಬೀಬಿ ಮತ್ತು ಎರಡನೆ ಇಬ್ರಾಹಿ
ಆದಿಲ್ ಶಹರ ಕಾಲ, ದಖನಿ ಸಂಸ್ಕೃತಿಯ ಸುವರ್ಣ ಯುಗವಾ
ಪರಿಣಮಿಸಿತು. ಉತ್ತರ ಭಾರತದ, ಮಧ್ಯ ಪ್ರಾಚ್ಯದ ಜನಾಂಗಗಳನ್ನು ಮು
ಮನಸ್ಸಿನಿಂದ ಬರಮಾಡಿಕೊಂಡ ಬಹಮನಿಗಳ ಸಂಪ್ರದಾಯ ಆಮೇಲ
ಮುಂದರಿದು ಮೇಲೆ ಹೆಸರಿಸಿದ ಕ್ಷೇತ್ರಗಳಲ್ಲೆಲ್ಲ 'ದಖನಿ' ಎಂದ
ಕರೆಯಬಹುದಾದ ಮಿಶ್ರ ಸಂಸ್ಕೃತಿ ಒಡಮೂಡಿತು. ಅಂದಿನಿಂ
ಜೀವಂತವಾಗಿ ಬಹುಕಾಲ ಮುಂದರಿದು ಬಂದವನ್ನು ಭಾಷೆ, ಲಿ
ವಿನ್ಯಾಸಗಳು, ಸಂಗೀತ, ಸಭೆ, ಮುಶಾಯರಾಗಳು, ಚಿಕಣಿ ಚಿತ್ರಕಲ
ಭಾವಚಿತ್ರಗಳು, ವಾಸ್ತು ಪ್ರಕಾರಗಳೆಂದು ಸ್ಥೂಲವಾಗಿ ವಿಭಾಗಿಸಬಹುದು
ವಾಸ್ತುವಿನ್ಯಾಸದಲ್ಲಿ ಮಿಗಿಲಾಗಿರುವ ಬಿಜಾಪುರ ಮತ್ತು ಪರಿಸರದ
ಆದಿಲ್‌ಶಾಹಿ ಕಾಲೀನ 300ರಷ್ಟು ಮುಸ್ಲಿಂ ಮತ್ತು ಹಿಂದು
ಪೂಜಾಸ್ಥಾನಗಳು, ಕೆರೆ, ಕೊಳ, ಬಾವಡಿಗಳು, ಕೋಟೆ, ಕೊತ್ತಳ, ಫಿರಂಗಿಗಳ
ಇನ್ನಿತರ ಕಟ್ಟಡಗಳು ಹರಡಿಹೋಗಿವೆ. ಇಲ್ಲಿ ಚಾಂದ್ ಬೀಬಿ ಮತ್ತು ಅವ
ಬಳಿಕದ ಒಂದೆರಡು ದಶಕದ ಸಾಂಸ್ಕೃತಿಕ ಪರಂಪರೆಯ ಇಣುಕ
ನೋಟಗಳನ್ನು ಕೊಡಲಾಗಿದೆ.

## ದಖನಿ ಭಾಷೆ

ಬಹಮನಿಗಳ ಕಾಲದಿಂದಲೂ ಅವರ ಸೈನ್ಯದಲ್ಲಿ ಸೇರಿಕೊಳ್ಳಲು ಈ
'ಹಿಂದಿ ಬೆಲ್ಟ್' ಎಂದು ಗುರುತಿಸಲ್ಪಡುವ ವಿಶಾಲ ಪ್ರದೇಶದ ಯೋ
ಜನಾಂಗದವರು ಬರುತ್ತಿದ್ದರು. ಅವರೆಲ್ಲ ಹಿಂದಿ ಮತ್ತು ಅದ
ಉಪಭಾಷೆಗಳಾದ ಬ್ರಜ್, ಅವಧಿ ಭೋಜಪುರಿ ಮತ್ತು ಮೈಥಿಲಗಳಂತ
ಮಾತೃಭಾಷೆಗಳನ್ನು ಮಾತನಾಡುವವರಾಗಿದ್ದರು. ರಾಜಾಧಿರಾಜರ ಭಾ
ರಾಜ-ಸಂಪರ್ಕ ಮತ್ತು ಆಡಳಿತ ಭಾಷೆ ಪರ್ಶಿಯನ್ ಆಗಿತ್ತು. ಆದರೆ ಜ
ಸಾಮಾನ್ಯರ ಸಂಪರ್ಕ ಭಾಷೆ 'ಹಿಂದುಇ' (ಹಿಂದಿ) ಅಥವಾ 'ಹಿಂದವಿ' ಆ
ಭಾರತದಾದ್ಯಂತ ಪರಿಚಿತವಿತ್ತು. ಸಂಚಾರಿ ಜನಾಂಗಗಳಾದ ಗೋಸಾವಿಗಳ
ಧರ್ಮ ಬೋಧಕರು, ಯಾತ್ರಿಕರು, ಸೈನಿಕರೆಲ್ಲ 'ಹಿಂದವಿ' ಬಳಸಿದರ
ದಖ್ಖನ್‌ಗೆ ಬಂದ ಸೈನಿಕರು, ಹಿಂದಿರುಗಿ ಹೋಗಲಾಗದವರು ಇಲ್ಲಿಯ
ಹೆಂಗಳೆಯರನ್ನು ಮದುವೆಯಾಗಿ ಇಲ್ಲಿಯೇ ನೆಲೆನಿಂತರು. ಹೀಗಾಗಿ ಸ್ಥಳೀಯ
ಭಾಷೆಗಳಾಗಿದ್ದ ಮರಾಠಿ, ಕನ್ನಡ, ತೆಲಗು, ಫಾರಸಿ (ಪರ್ಶಿಯನ್)ಗ

ಜೊತೆಗೆ ರೂಢಿಯಲ್ಲಿ ಅದಾಗಲೇ ಕಾಣಿಸಿಕೊಂಡ ತುರ್ಕಿ, ಅರಬಿ ಶಬ್ದಗಳೆಲ್ಲ ಅವರ ಆಡು ಭಾಷೆಯಾಗಿದ್ದ ಹಿಂದಿ ಅಥವಾ ಹಿಂದವಿಯಲ್ಲಿ ಸೇರಿಕೊಂಡವು. ಮಿಶ್ರಭಾಷೆಯಾಗಿ ದಖ್ಖನಿ ಹಿಂದಿ ಬೆಳೆಯಿತು. ಈ ಭಾಷೆಯ ವ್ಯಾಕರಣದ ಚೌಕಟ್ಟು ಭಾರತೀಯವೇ! ಲಿಪಿ ಮಾತ್ರ ಬಲದಿಂದ ಎಡಕ್ಕೆ ಬರೆಯುವ ಫಾರಸಿ ಲಿಪಿಯ ರೂಪವಾಗಿದೆ.

ಗುಲ್ಬರ್ಗಾದಲ್ಲಿ ನೆಲೆಸಿದ ಸೂಫಿ ಸಂತ ಬಂದೇ ನವಾಝ್ ಬೋಧಕ ಭಾಷೆಯಾಗಿ ಬಳಸಿದ್ದು ದಖನಿ ಹಿಂದಿಯನ್ನು. ಅವರ ಮೂರು ಕೃತಿಗಳು ಈ ಭಾಷೆಯ ಮೊದಲ ಕೃತಿಗಳಾಗಿವೆ. ಕರೇಶಿ ಬಿದರಿ ಮತ್ತು ಅಲಿ ಆದಿಲ್ ಶಹನ ಕಾಲದಲ್ಲಿ 'ಖುಶ್‌ನಾಮಾ' ಬರೆದ ದಶೇಡ್ ಮಿರಾಂಜಿ ತಮ್ಮ ಕೃತಿಗಳನ್ನು ಹಿಂದಿಯಲ್ಲಿ ಬರೆದಿದ್ದಾಗಿ ಹೇಳಿಕೊಂಡಿದ್ದಾರೆ. ನಂತರದ ಎರಡನೆಯ ಇಬ್ರಾಹಿಮ್ ಆದಿಲ್ ಶಹನ ಸಂಗೀತಶಾಸ್ತ್ರದ ಪ್ರಸಿದ್ಧಕೃತಿ 'ಕಿತಾಬ್-ಎ-ನವರಸ್' ಈ ದಖ್ಖನಿ ಹಿಂದಿಯಲ್ಲೇ ಇದೆ.

ಇದೇ ಭಾಷೆ, ಸೈನಿಕರ ಬಾಯಲ್ಲಿ 'ಉರ್ದು' ಆಗಿ ಪರಿಣಮಿಸಿತು. 'ಉರ್ದು' ಅಥವಾ 'ಓರ್ದು' ಎಂದರೆ ಅರಬ್ಬಿ ಭಾಷೆಯಲ್ಲಿ ಕ್ಯಾಂಪ್, ಬಿಡದಿ ಅಥವಾ ಠಾಣ್ಯ ಎಂದು ಅರ್ಥ. ಆಯುಷ್ಯವಿಡೀ ಯುದ್ಧಭೂಮಿ ಮತ್ತು ಬಿಡದಿಗಳಲ್ಲಿ ಕಳೆಯುತ್ತಿದ್ದವರ ಜೊತೆಗೆ ನಾನಾ ಪ್ರದೇಶಗಳಿಂದ ಬರುತ್ತಿದ್ದ ವರ್ತಕರು, ಯಾತ್ರಾರ್ಥಿಗಳೆಲ್ಲ ಈ ಭಾಷೆಯನ್ನು ಬಳಸಲಾರಂಭಿಸಿ ಅದಕ್ಕೆ ಅಖಿಲ ಭಾರತದ ರೂಪ ಬಂದಿತು.

ಮೊಗಲರು ಕ್ರಮೇಣ ದಖ್ಖನದ ಶಾಹೀರಾಜ್ಯಗಳನ್ನು ಗೆದ್ದ ಬಳಿಕ ಇತರ ಸಾಂಸ್ಕೃತಿಕ ಪ್ರಕಾರಗಳೊಂದಿಗೆ ದಖ್ಖನಿ ಭಾಷೆಯೂ ಉತ್ತರಕ್ಕೆ ಪಯಣಿಸಿತು. ಅದಾಗಲೇ ಶಿಷ್ಟಭಾಷೆಯಾಗಿ ಬೆಳೆದ ಭಾಷೆ, ಕೊಂಚ ಬದಲಾವಣೆಗಳೊಂದಿಗೆ ಶೀಘ್ರವೇ ಜನಪ್ರಿಯವಾಯಿತು. ಒಂದೇ ಶತಮಾನದಲ್ಲಿ ಸಂಪರ್ಕ ಭಾಷೆಯಾಗಿದ್ದ ಪರ್ಶಿಯನ್ ಭಾಷೆಯನ್ನು ಹಿಂದಕ್ಕೆ ಅಟ್ಟಿಬಿಟ್ಟಿತು! ಹಿಂದೂ-ಮುಸ್ಲಿಂ ಭೇದವಿಲ್ಲದೇ ಈ ಭಾಷೆ ಸಾಹಿತ್ಯ ಮಾಧ್ಯಮವೂ ಆಯಿತು. ಗಾಂಧೀಜಿ ರಾಷ್ಟ್ರಭಾಷೆಯಾಗಬೇಕೆಂದು ಪ್ರತಿಪಾದಿಸಿದ್ದು ಈ ಇದೇ 'ಹಿಂದುಸ್ಥಾನಿ!' ನೆಹರೂ, ಸುಭಾಷ್‌ಚಂದ್ರ ಬೋಸ್, ಆಚಾರ್ಯ ಕೃಪಲಾನಿ, ರಾಜೇಂದ್ರ ಪ್ರಸಾದ್, ಜಯಪ್ರಕಾಶ ನಾರಾಯಣರಾದಿಯಾಗಿ ಪ್ರದೇಶಭೇದವಿದ್ದ ಮುಖಂಡರೆಲ್ಲರ ಸ್ವಾತಂತ್ರ್ಯ ಹೋರಾಟದ ದಿನಗಳಲ್ಲಿ ಈ ಹಿಂದಿ ಪ್ರಚಾರಭಾಷೆಯಾಗಿ ಬೆಳೆಯಿತು. ಭಾಷೆಯ ಲಿಪಿಗೆ

ದೇವನಾಗರಿಯನ್ನು ಬಳಸಲಾರಂಭಿಸಿದರು. ಫಾರಸಿ ಲಿಪಿಯ ಭಾ 'ಉರ್ದು' ಎನಿಸಿಕೊಂಡಿತು. ಅಂದಿನ ಭಾರತೀಯ ಮಾನಸದ ಕನ್ನಡಿಯಂ ಇದ್ದ ಉರ್ದು ಭಾಷೆ ಈಗ ಪಾಕಿಸ್ತಾನದ ರಾಷ್ಟ್ರಭಾಷೆಯಾಗಿ ಮೆರೆಯುತ್ತಿದ ಆದರೆ ಅದರ ಉಗಮ ಮತ್ತು ಶಿಷ್ಟರೂಪಗಳು ಸ್ಪಷ್ಟವಾಗಿ ರೂಪಗೊಂಡದ್ದು ಕರ್ನಾಟಕದಲ್ಲಿ, ಅಂದಿನ ಬಿಜಾಪುರದಲ್ಲಿ!

## ಸಾಹಿತ್ಯ ಹಾಗೂ ಪುಸ್ತಕ ಸಂಸ್ಕೃತಿ

ಕಳೆದ ಐದುನೂರು ವರ್ಷಗಳಲ್ಲಿ ಸಾವಿರಾರು ಕೃತಿಗಳು ದಖ (ಉರ್ದು) ಭಾಷೆಯಲ್ಲಿ ರಚಿಸಲ್ಪಟ್ಟವುಗಳು ದೊರೆಯುತ್ತವೆ. ಕೆಲವ ಗೋಲ್ಕೊಂಡದವು (ಹೈದರಾಬಾದ್) ಇದ್ದರೂ, ಮುಕ್ಕಾಲು ಪಾಲ ಬಿಜಾಪುರದವು. ರಾಷ್ಟ್ರೀಯ ರಾಜಗ್ರಂಥ ಭಂಡಾರದಲ್ಲಿ ದೊರೆತ ಪುಸ್ತಕಗಳ ಹತ್ತು ಪ್ರಕಾರದವು ಇವೆ. 1) ಪವಿತ್ರ ಕುರಾನ್ ಮತ್ತು ಅದರ ವ್ಯಾಖ್ಯಾನಗಳು 2) ಇಸ್ಲಾಂ ಧರ್ಮದ ಇತಿಹಾಸ, 3) ನ್ಯಾಯ ಸಂಹಿತೆ, 4) ಸೂಫಿ ಸಂತ ಜೀವನ ಚರಿತ್ರೆಗಳು, 5) ತರ್ಕಶಾಸ್ತ್ರ, 6) ಸಮಕಾಲೀನ ಅರಸರೊಡನೆಯ ಪತ್ರ ವ್ಯವಹಾರದ ಪ್ರತಿಗಳು, 7) ಆದಿಲ್‌ಶಾಹಿ ಮನೆತನದ, ರಾಜರ ಚರಿ (ಕೆಲ ಮಟ್ಟಿಗೆ), ಪ್ರದೇಶ ಪರಿಚಯ ಮತ್ತು ಪ್ರವಾಸಗಳನ್ನು ಕೈಕೊಳ್ಳುವ ಕುರಿ ಸೂಚನೆಗಳು, 8) ವೈದ್ಯಕೀಯ ಗ್ರಂಥಗಳು, 9) ಕೆರೆಕೊಳಗಳ ನಿರ್ಮಾಣ ಮತ್ತು 10) ಕಾವ್ಯ–ಕಥೆ–ಕವನಗಳು.

ಕಾಗದದ ಬಳಕೆ ಸಾಮಾನ್ಯವಾಗಿತ್ತು. ಮುದ್ರಣಯಂತ್ರ ಆವಿಷ್ಕಾರವಾಗಿದ್ದರೂ ಯುರೋಪದ ಮಟ್ಟಿಗೆ ಸೀಮಿತವಾಗಿತ್ತು. ಹೀಗಾ ಅಂದದ ಸ್ಪಷ್ಟವಾದ ಕೈಬರಹಕ್ಕೆ ತುಂಬ ಬೇಡಿಕೆ ಇತ್ತು. ಬರವಣಿಗೆ (ಲಿಪಿ ಯೆಂಬುದು ಅತ್ಯಂತ ಕಲಾತ್ಮಕ ರೂಪ ಪಡೆದು ಏಳು ಪ್ರಕಾರದ ಶೈಲಿಗಳ ಬೆಳೆದು ಬಂದಿತು. ಲಿಪಿ ವಿನ್ಯಾಸ ಅಥವಾ ಅಲಂಕಾರಿಕ ಬರವಣಿಗೆಗ ಪ್ರಕಾರಕ್ಕೆ ಬಿಜಾಪುರದ ಕೊಡುಗೆ ದೊಡ್ಡದಿದೆ.

## ಲಿಪಿಗಳ ಕಲಾತ್ಮಕ ಬೆಳವಣಿಗೆ

ಅರಬ್ಬೀ ಮೂಲದ ಫಾರಸಿ ಲಿಪಿ ಶತಮಾನಗಳಲ್ಲಿ ಬದಲಾವಣ ಪಡೆಯುತ್ತ ನಡೆಯಿತು. ಅಕ್ಷರ ವಿನ್ಯಾಸಕ್ಕೆ ಚಿತ್ರಕಲೆಯಷ್ಟೆ ಮಹತ್ವದ ಪಾ ಒದಗಿತು. ಇಸ್ಲಾಂ ಧರ್ಮದಲ್ಲಿ ವಾಸ್ತುವೂ ಸೇರಿದಂತೆ ಧಾರ್ಮಿಕ ಕಲೆಗಳ ಮನುಷ್ಯ, ಪ್ರಾಣಿ, ಪಕ್ಷಿ ಮುಂತಾದವುಗಳ ಚಿತ್ರ ನಿರ್ಮಾಣಕ್ಕೆ ಅವಕಾಶ ಇಲ್ಲ

ಆದರೆ ಸೃಜನಶೀಲತೆ ಎಂಬುದು ನಿಷೇಧಗಳ ಚೌಕಟ್ಟಿನಲ್ಲಿಯೂ ಬೆಳೆದು ಬರುವದು ವಿಸ್ಮಯಕಾರಿ! ಕಲಾತ್ಮಕತೆಯನ್ನು ಅಕ್ಷರ ವಿನ್ಯಾಸಗಳಲ್ಲಿ ಅರಬ್ಬಿ-ಫಾರ್ಸಿ ಕಲಾಕಾರರು ಮೆರೆದರು. ಅಕ್ಷರಮಾಲೆಯನ್ನು ಉಗಮದಲ್ಲಿ ನದಿಯಂತೆ ಕಿರಿದಾಗಿಸಿ ಆಮೇಲೆ ಹಿಗ್ಗಿಸುತ್ತ ಹೋಗುವದು, ದುಂಡುದುಂಡಾಗಿ ಗಂಟುಗಳನ್ನು ಹೆಣೆಯುವದು, ಹತ್ತಾರು ಶಬ್ದಗಳನ್ನು ಒತ್ತಾಗಿ ಬರೆಯುವದು ಇಲ್ಲವೇ ಒಂದೇ ಶಬ್ದವನ್ನು ಮಾರುದ್ದ ಹಿಗ್ಗಿಸುವದು ಇಂಥವುಗಳಲ್ಲಿ ಅಕ್ಷರ ಪರಿಣತನು ರೂಪಿಸಿದ ಕಲಾವಿನ್ಯಾಸ, ಚಿತ್ರಕಲೆಯಷ್ಟೇ ಆಕರ್ಷತವಾಗಿರುತ್ತದೆ. ಕಾಲಾಂತರದಲ್ಲಿ ಸುಮಾರು ಹದಿನೆಂಟು ಲಿಪಿಶೈಲಿಗಳು ಕಾಣಿಸಿಕೊಂಡು, ಜನಪ್ರಿಯವಾದವು.

ಜ್ಯಾಮಿತಿ ಬಂಧಗಳೊಂದಿಗೆ ಗಿಡ, ಮರ, ಹೂ, ಬಳ್ಳಿಗಳ ಅಂದವಾದ ಚೌಕಟ್ಟುಗಳು, ಪುಸ್ತಕಗಳು, ಕಟ್ಟಡಗಳು, ಕಿಟಕಿ, ಮಹಾದ್ವಾರಗಳು, ಅಂಗಣ ಮತ್ತು ಪ್ರಾರ್ಥನಾ ಸ್ಥಳಗಳಲ್ಲಿ ಕಂಡುಬಂದವು. ಅರೆಶಿಲೆ ಶಂಖ, ಸುಣ್ಣ, ಚಿನ್ನದ ಪುಡಿಗಳನ್ನು ಚಿತ್ರ ಪುಸ್ತಕಕ್ಕೆ ಬಳಸಿದರು. ಕಟ್ಟಡಗಳಲ್ಲಿ, ಬೇರೆ ಬೇರೆ ಕೋನಗಳಿಂದ ಬೆಳಕು ತೂರಿಬಂದು ಬಣ್ಣ ಬಣ್ಣದ ಹೆಂಚುಗಳಲ್ಲಿ ಮಿನುಗಿ ಬರುವ ಮಾಯಾಲೋಕವನ್ನು ಶಿಲ್ಪಿಗಳು ನಿರ್ಮಿಸಿದರು. ಅಲ್ಲಾನ ಸಂದೇಶವೆನಿಸಿಕೊಂಡ ವಾಕ್ಯಗಳನ್ನು, ಕುರಾನಿನ ಸೂಕ್ತಿ ಸಂದೇಶಗಳನ್ನು ಮಸೀದಿಯ ಒಳಗೆ ಮತ್ತು ಹೊರಗೆ ಚಿತ್ರಿಸಿದರು. ಪ್ರಾರ್ಥನಾ ವೇದಿಕೆಯ ಚೌಕಟ್ಟುಗಳೆಲ್ಲ ಹೂ, ಎಲೆ, ಮೊಗ್ಗುಗಳ ವಿವಿಧ ನಕ್ಷೆಗಳ ಅಲಂಕಾರ ಪಡೆದವು. ಕುರಾನ್ ಸೂಕ್ತಿಗಳೊಂದಿಗೆ ಕೆಲಬಾರಿ ಪ್ರಸಿದ್ಧ ಕಾವ್ಯಗಳ ಸಾಲುಗಳೂ ಕಾಣಿಸಿಕೊಂಡವು.

ಮಸೀದಿ, ಮಿನಾರು, ಸಮಾಧಿಗಳು ಮುಖ್ಯ ಸ್ಮಾರಕಗಳಾಗಿ ಉಳಿದಿವೆ. ಇವುಗಳಲ್ಲಿ ಕುರಾನಿನ ವಾಕ್ಯಗಳಿಗೆ ಪ್ರಾಧಾನ್ಯ ಕೊಟ್ಟರೂ ಅವುಗಳ ನಿರ್ಮಾಣಕ್ಕೆ ಕಾರಣರಾದ ಅರಸರ, ಸರದಾರರ, ಅಧಿಕಾರಿಗಳ ಹೆಸರೂ ಇರುವದುಂಟು. ಇತಿಹಾಸ ಅರಿಯಲು ಕೆಲವೊಮ್ಮೆ ಈ ಲಿಪಿಯ ಸಾಲುಗಳು ಸಹಾಯಮಾಡುತ್ತವೆ. ರಕ್ಕಸ-ತಂಗಡಿ ಯುದ್ಧದ ಉಲ್ಲೇಖ ಆ ವರ್ಷದಲ್ಲೇ ಬರೆಸಿದ ಶಾಸನದಲ್ಲಿದೆ.

ಅಕ್ಷರಗಳನ್ನು ಕರಗತ ಮಾಡಿಕೊಂಡವರಿಗೆ ಖಾಸ್‌ನವೀಸ್ ಅಥವಾ ಖಾಸನೀಸ್ ಎನ್ನುತ್ತಿದ್ದರು. ಹಿಂದೂ-ಮುಸ್ಲಿಂ ಇಬ್ಬರೂ ಈ ಕಲೆಯಲ್ಲಿ ಪರಿಣತರಿದ್ದು, ಎಲ್ಲರೂ ಅವರನ್ನು ತುಂಬ ಗೌರವದಿಂದ ಕಾಣುತ್ತಿದ್ದರು.

ಪುಸ್ತಕಗಳು ಕೈಬರಹದಲ್ಲಿ ಅತ್ಯಂತ ಸುಂದರ ಬಣ್ಣಗಳಲ್ಲಿ ಮುದ್ದಾದ, ಬೇಗ ಬೇಗ ಓದಿಕೊಂಡು ಹೋಗಬಹುದಾದ ಅಕ್ಷರಗಳಲ್ಲಿ ಬರೆಯಲ್ಪಡುತ್ತಿದ್ದವು.

ಆತ್ಮಚರಿತ್ರೆ, ಕವಿತೆ, ಚರಿತ್ರೆಗಳೆಲ್ಲ ದಪ್ಪ ಬಿದಿರಿನ ಲೇಖನಿ ಇಲ್ಲವೇ ಸೂಕ್ಷ್ಮ ಕುಂಚದ ಸಹಾಯದಿಂದ ಬರೆಯಲ್ಪಡುತ್ತಿದ್ದವು. ಇಬ್ರಾಹಿಮ್ ಆದಿಲ್ ಶಹ, ತನ್ನ ಪ್ರಸಿದ್ಧ ಸಂಗೀತ ಶಾಸ್ತ್ರದ ಕೃತಿ 'ಕಿತಾಬ್-ಎ-ನವರಸ್' ಗ್ರಂಥಕ್ಕೆ ಸುಂದರ ಅಕ್ಷರ ವಿನ್ಯಾಸ ಮತ್ತು ಚಿತ್ರಗಳನ್ನು ರಚಿಸಿಕೊಟ್ಟ ಮೀರ್ ಖಲಿಯಸ್ ಶಾನನ್ನು ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ ಗೌರವಿಸಿದ್ದನಂತೆ!

## ಕವಿಗೋಷ್ಠಿ ಮುಶಾಯರಾ

ಇಸ್ಲಾಂ ಧಾರ್ಮಿಕ ಸಭೆಗಳಲ್ಲಿ ಸಂಗೀತ ಮತ್ತು ನೃತ್ಯಗಳಿಗೆ ಸ್ಥಾನವಿಲ್ಲ. ಆದರೆ ಕರ್ನಾಟಕದಲ್ಲಿ ಹರಡಿಕೊಂಡ ಸೂಫಿ ಸಂತರಿಗೆ ಸಂಗೀತವೆಂದರೆ ಅನುಭಾವದ ಸಾಧನವಾಗಿ ಪರಿಣಮಿಸಿತು. ಹರಿದಾಸರಿಂದಾಗಿ ಭಕ್ತಿಯ ಹಾಡುಗಳು ದೈವೋಪಾಸನೆಯ ಮಾಧ್ಯಮವಾಗಿ ಜನಪ್ರಿಯವಾಗಿದ್ದವು; ಸೂಫಿ ಸಂತರಿಗೆ ಪರಿಚಿತವಿದ್ದವು. ಸಮಾ ಎಂಬ ಅನುಭಾವಿ ಸಂಗೀತ ಸಭೆಗಳು ಖಾನಖಾ(ಸೂಫಿಮಠ)ಗಳಲ್ಲಿ ಕಾಣಿಸಿಕೊಂಡವು. ಕುರಾನ್ ಮಂತ್ರಗಳನ್ನು ರಾಗಬದ್ಧವಾಗಿ ಪಠಿಸುವದು ಕ್ರಮೇಣ ಗಾನಕ್ಕೆ ಅವಕಾಶ ಮಾಡಿಕೊಟ್ಟಿತು. ಬಂದೇನವಾಜ್ ಸಂಗೀತ ಪ್ರೇಮಿಯಾಗಿದ್ದ. ಒಮ್ಮೆ ಅವನು ಸಂಪ್ರದಾಯಸ್ಥ ದಿಲ್ಲಿಯಲ್ಲಿ ಮೂರು ದಿನಗಳ ಸಮಾ ನಡೆಸಿದನಂತೆ!

ಸಾಹಿತ್ಯ-ಸಂಗೀತ ಪ್ರಿಯ ಆದಿಲ್‌ಶಾಹಿ ಅರಸರಿಂದಾಗಿ ಕವಿಮೇಳ ಮತ್ತು ಸಂಗೀತ ಗೋಷ್ಠಿಗಳಿಗೆ ಹೆಚ್ಚಿನ ಪ್ರೋತ್ಸಾಹ ಸಿಕ್ಕಿತು. 'ಮುಶಾಯರಾ' ಶಿಷ್ಟರೂಪದಲ್ಲಿ ಬಿಜಾಪುರದಲ್ಲಿ ಜನ್ಮತಾಳಿತು.

## ಮೊಹರಂ ಆಚರಣೆ

ಮುಖ್ಯವಾಗಿ ಶಿಯಾ ಮತಾನುಚಾರಿಗಳಾದ ಆದಿಲ್‌ಶಾಹಿಗಳ ಕಾಲದಲ್ಲಿ ಮೊಹರಂ ಕಾಲವು ಶೋಕಾಚರಣೆಯದಾಗಿತ್ತು. ಆ ಸಂದರ್ಭದಲ್ಲಿ ಹರಕೆ ಹೊತ್ತು ಹಿಂದೂಗಳೂ ಪಾಲ್ಗೊಂಡು ಹುಲಿಯ ವೇಷಧರಿಸಿ ಕುಣಿಯುವುದು ಸಾಮಾನ್ಯವಾಗಿತ್ತು. ಉತ್ತರ ಕರ್ನಾಟಕದ ಸಣ್ಣ ಸಣ್ಣ ಊರುಗಳಲ್ಲೂ ಸೂಫಿ ಸಂತರ ಸಮಾಧಿಗಳಿವೆ. ಅಲ್ಲಿಯ ಉರುಸ್‌ಗಳು ಜಾತ್ರೆಗಳಾಗಿ ಮಾರ್ಪಟ್ಟಿವೆ.

ಎರಡೂ ಧರ್ಮದ ಜನ ಪೂಜೆಯಲ್ಲಿ ಪಾಲ್ಗೊಂಡು ಕೃತಾರ್ಥರಾಗುತ್ತಾರೆ. ಇದು ಆದಿಲ್‌ಶಾಹಿಗಳು ಬಿತ್ತಿದ ಸಾಮರಸ್ಯದ ಕುರುಹಾಗಿ ಮುಂದುವರಿದಿದೆ.

## ಚಿಕಣಿ ಚಿತ್ರಕಲೆ

ಸ್ವತಃ ಚಾಂದ್ ಬೀಬಿ ಚಿತ್ರಬಿಡಿಸುವಲ್ಲಿ ನಿಷ್ಣಾತೆಯಾಗಿದ್ದರೆ, ಅವಳ ಪತಿ ಅಲಿ ಆದಿಲ್ ಶಹನು, ಅಲಂಕಾರಿಕ ಲಿಪಿಯಲ್ಲಿ ತಜ್ಞನಾಗಿದ್ದ. ಅವರ ಪ್ರೋತ್ಸಾಹದಿಂದ ಬಿಜಾಪುರದಲ್ಲಿ ಅನೇಕ ಪ್ರಸಿದ್ಧ ಕಲಾಕಾರರು ಕಾಣಿಸಿಕೊಂಡರು. ಸುದೈವದಿಂದ ಅವರ ಕಾಲದ ಚಿತ್ರಗಳ ಕೆಲ ಪ್ರತಿಗಳು ವಿದೇಶಿ ಮತ್ತು ದೇಶದ ಸಂಗ್ರಹಾಲಯಗಳಲ್ಲಿ ಉಳಿದುಕೊಂಡಿವೆ. ನಕ್ಷತ್ರ ಶಾಸ್ತ್ರಕ್ಕೆ ಸಂಬಂಧಿಸಿದ 'ನಂಜುಮ್-ಉಲ್-ಉಲುಮ್' ಎಂಬ ಸಚಿತ್ರ ಗ್ರಂಥವನ್ನು ಅಲಿಯು ಬರೆಸಿದ. ನಕ್ಷತ್ರದ ನಕ್ಷೆಗಳು, ಮಂತ್ರ ಮಂಡಳಗಳು, ಆಯುಧಗಳು, ಪ್ರಾಣಿಗಳು, ಆನೆಯುದ್ಧ ಮುಂತಾದವು ಅದರಲ್ಲಿ ಇವೆ. ಇದೇ



'ನಂಜುಮ್-ಉಲ್-ಉಲುಮ್' ಕೃತಿಯ ಒಂದು ಪುಟ



'ಜವಾಹಿರ್ ಅಲ್-ಮುಸಿಕಲ್ ಮಹಮ್ಮದಿ' ಕೃತಿಯ ಒಂದು ಪುಟ

ಅವಧಿಯ, ಸಂಗೀತಕ್ಕೆ ಸಂಬಂಧಿಸಿದ 'ಜವಾಹಿರ್ ಅಲ್-ಮುಸಿಕಲ್ ಮಹಮ್ಮದಿ' ಎಂಬ ಗ್ರಂಥವಿದೆ. ಸಹಜವಾಗಿಯೇ ಆ ಕಾಲಕ್ಕೆ ಪ್ರಚಲಿತವಿದ್ದ ಸಂಗೀತಶಾಸ್ತ್ರಕ್ಕೆ ಪೂರಕವಾದ ಸ್ವರಗಳಿಗೆ ಸಂಬಂಧಿತ ಚಿತ್ರ ಹಾಗೂ ಚಿಹ್ನೆಗಳಿವೆ. ರಾಗ-ರಾಗಿಣಿಯರ ಚಿತ್ರಗಳು, ನೃತ್ಯಕಲೆಯ 24 ಕಾರಣಗಳನ್ನು ನೆನಪಿಸುವ ಚಿತ್ರಗಳಿವೆ.

ಸಾಮಾನ್ಯವಾಗಿ ರಾಗ-ರಾಗಿಣಿ ಚಿತ್ರಗಳೆಲ್ಲ ಮೊಗಲರ ಕಾಲಕ್ಕೆ ರೂಪಗೊಂಡು, ಬಳಿಕ ಶಿಖರಕ್ಕೇರಿದವು ಎಂಬ ಅಭಿಪ್ರಾಯವಿದೆ. ಆದರೆ ದಖ್ಖನ್ ಪ್ರದೇಶದಲ್ಲಿ ಅದಕ್ಕೂ ಮೊದಲು ಇಂಥ ಚಿಕಣಿ ಚಿತ್ರಗಳ ಉದಯವಾಗಿದೆ ಎಂದು ವಿದೇಶಗಳನ್ನು ತಲಪಿದ ಶಾಹೀ ಅರಸರ ಕಾಲದ ಚಿಕಣಿ ಚಿತ್ರಗಳ ಆಧಾರದ ಮೇಲೆ ಹೇಳಲಾಗುತ್ತದೆ. ಬಹಮನಿಗಳ ಕೊನೆಯ ದಿನಗಳಲ್ಲಿ ಮತ್ತು ಆದಿಲ್‌ಶಾಹಿಗಳ ಪ್ರಾರಂಭ ಕಾಲದಲ್ಲೇ ಪರ್ಶಿಯದಿಂದ ಬಿಜಾಪುರದಕ್ಕೆ ಬಂದು ನೆಲೆಸಿದ ಕಲಾವಿದರಿಂದ ಚಿಕಣಿ ಚಿತ್ರಕಲೆ ಸ್ವತಂತ್ರವಾಗಿ ರೂಪಗೊಂಡಿತು. ಈ ದಖ್ಖನಿ ಸಂಪ್ರದಾಯದ ವೈಶಿಷ್ಟ್ಯವೆಂದರೆ, ಇಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಚಿತ್ರಗಳು ಸ್ಥಳೀಯ ವೇಷಭೂಷಣಗಳಲ್ಲಿವೆ. ಕೆಲ ಉಪಕರಣಗಳು, ಪೀಠಗಳು, ಆಯುಧಗಳು ಅಂದಿನ ಜೀವನವನ್ನು ಅರಿಯಲು ಸಹಾಯ ಮಾಡುತ್ತವೆ.

## ಭಾವಚಿತ್ರಗಳು

ರಾಜಮನೆತನದವರ ಚಿತ್ರಗಳನ್ನು ಬರೆಸುವ ಪದ್ಧತಿ ಆದಿಲ್‌ಶಾಹಿಗಳ ಕಾಲದಿಂದಲೇ ಪ್ರಾರಂಭವಾಯಿತು. ಈಗ ಲಭ್ಯವಿರುವಲ್ಲಿ ಅಲಿ ಮತ್ತು ಚಾಂದ್ ಬೀಬಿಯರವು ಕಡಿಮೆ ಇವೆ. ಅವಳ ತಾಯ್ತಂದೆಗಳದು ಒಂದು ಭಾವಚಿತ್ರ ಇದೆಯಾದರೂ, ಅಪ್ರತಿಮ ರಾಜಮಾತೆಯಾಗಿದ್ದ ಖುಂಝಾ ಹುಮಾಯೂನ್‌ಳ ಮುಖ ಮೈಗಳನ್ನು ಪಾರದರ್ಶಕವೆನಿಸುವ ಮುಸುಕಿನಿಂದ ಮುಚ್ಚಿಹಾಕಲಾಗಿದೆ! ಹೊಳೆ ಹೊಳೆಯುವ ಬಣ್ಣಗಳು, ಸುವರ್ಣ ರೇಖೆಗಳನ್ನು ಹೊಂದಿದ ಚಿತ್ರಗಳು, ಇಂದಿಗೂ ನಳನಳಿಸುತ್ತಿವೆ. ಗಿಡುಗವನ್ನು ಕೈಯಲ್ಲಿ ಹಿಡಿದು ಕುದುರೆಯೇರಿ ವೇಗವಾಗಿ ಹೊರಟ ಚಾಂದ್ ಬೀಬಿಯ ಚಿತ್ರ, ಅವಳ ಹೊರಾಂಗಣ ಚಟುವಟಿಕೆಗಳ ದ್ಯೋತಕವಾಗಿದೆ.

ಅಲಿಯ ಕಾಲದ ಚಿತ್ರಕಲೆ ಆತನ ಬಳಿಕ ಪಟ್ಟವೇರಿದ ಇಬ್ರಾಹಿಮನ ಕಾಲಕ್ಕೆ ಹುಲುಸಾಗಿ ಬೆಳೆಯಿತು. ಮುಂದೆ ಮೊಗಲರ ದೆಸೆಯಿಂದ ಆದಿಲ್ ಶಾಹಿ-ನಿಜಾಮ್‌ಶಾಹಿ ರಾಜ್ಯಗಳು ಮಣ್ಣುಗೂಡಿದರೂ ಅವರ ಕಲಾ



ಚಾಂದ್ ಬೀಬಿ

ಪ್ರಕಾರಗಳು ಮೊಗಲರ ಆಸ್ಥಾನಕ್ಕೆ ತೆರಳಿ ವಿಶಿಷ್ಟ ಪ್ರಕಾರವಾಗಿ ಬೆಳೆದವು. ಅದರಲ್ಲಿ ಚಿತ್ರಕಲೆಯೂ ಒಂದು. ಮೊಗಲ್ ಚಿತ್ರಕಲೆಯು ಪುನಃ ಮರಾಠರ ಕಾಲಕ್ಕೆ ತಂಜಾವೂರು, ಸುರಪುರಗಳಿಗೆ ಬರುವಂತಾಗಿ ರಾಗ-ರಾಗಿಣಿ ಚಿಕಣಿ ಚಿತ್ರಗಳ ಚಕ್ರದ ಕತೆ ತಿರುಗಿ ಅದರ ವಿಜಾಪುರದ ಹುಟ್ಟೂರನ್ನು ನೆನಪಿಸುವಂತಾಗುತ್ತದೆ!

## ವಾಸ್ತು: ಕೆಲ ಅಪೂರ್ವ ಮಾದರಿಗಳು

ಹತ್ತು ಲಕ್ಷಕ್ಕೂ ಮೀರಿದ ಜನಸಂಖ್ಯೆಯ ಅಂದಿನ ರಾಜಧಾನಿ ಬಿಜಾಪುರದ ವಿಸ್ತಾರ 30 ಮೈಲಿಗಳಷ್ಟು ಹಬ್ಬಿತ್ತು. 100ಕ್ಕೂ ಮೀರಿದ ಆಗಿನ ಶಿಲ್ಪಕಲೆ, ವಾಸ್ತುಕಲೆ, ವಾಸ್ತುವಿನ ಕಟ್ಟಡಗಳನ್ನು ಗುರುತಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಜಾಮಿ ಮಸೀದಿ, ಗಗನ್ ಮಹಲ್, ಅಸರಿ ಮಹಲ್, ಸೌತ್ ಮಂಜಿಲ್, ಇಬ್ರಾಹಿಮ್ ರೋಜಾ; ಇವು ಚಾಂದ್



ಜಾಮಿ ಮಸೀದಿ ಕಟ್ಟಡ, ಬಿಜಾಪುರ

ಬೀಬಿಯ ಕಾಲಕ್ಕೆ ಮತ್ತು ಇಬ್ರಾಹಿಮನ ಕಾಲಕ್ಕೆ ನಿಕಟವಾದವು. ವಿಶ್ವವಿಖ್ಯಾತ ಗೋಲ್‌ಗುಮ್ಮಟವನ್ನು ಇಬ್ರಾಹಿಮನ ಮಗ ಮುಹಮ್ಮದನು ಕಟ್ಟಿಸಿದ.

ಗಗನ್ ಮಹಲ್ ಆದಿಲ್‌ಶಾಹಿಗಳ ಆಡಳಿತ ಕೇಂದ್ರವಾಗಿತ್ತು. ಚಾಂದ್ ಬೀಬಿ ಇಲ್ಲಿಂದಲೇ ರಾಜ್ಯಕಾರಭಾರ ನಿರ್ವಹಿಸುತ್ತಿದ್ದಳು. ಇಲ್ಲಿಯೇ ಆದಿಲ್ ಶಾಹಿಗಳ ಕೊನೆಯ ಅರಸು ಸಿಕಂದರನನ್ನು ಔರಂಗಜೇಬನ ಎದುರಿಗೆ ಹಾಜರ್ ಪಡಿಸಲಾಯಿತಂತೆ!

ಅಸರಿ ಮಹಲ್ ಆದಿಲ್‌ಶಾಹಿಗಳ ಬೃಹತ್ ಗ್ರಂಥ ಭಂಡಾರವಾಗಿತ್ತು. ಈ ವಾಚನಾಲಯಕ್ಕೆ ಹೊಂದಿಕೊಂಡಂತೆ ಪ್ರತಿಗಳನ್ನು ಮಾಡಲು ದೊಡ್ಡ ಹಜಾರಗಳ ಕಟ್ಟಡವಿತ್ತು. ಅಲ್ಲಿ ಅರವತ್ತು ಜನ ಗ್ರಂಥಗಳ ಪ್ರತಿಮಾಡುವವರು, ಚಿತ್ರ, ಪುಟಗಳಿಗೆ ಅಲಂಕೃತ ಅಂಚುಗಳನ್ನು ರೇಖಿಸುವವರು ಮತ್ತು ಪುಸ್ತಕಗಳನ್ನು ಕಟ್ಟುವವರು ಇದ್ದು ಇಡೀ ದಿನ ಕೆಲಸ ಮಾಡುತ್ತಿದ್ದರು.

ಬಿಜಾಪುರವನ್ನು 1686ರಲ್ಲಿ ಗೆದ್ದ ಔರಂಗಜೇಬನು ಅಲ್ಲಿಯ ಅತ್ಯುತ್ತಮ ಅರಬ್ಬೀ ಮತ್ತು ಫಾರಸಿ ಗ್ರಂಥಗಳನ್ನು ಆರು ಬಂಡಿಗಳಲ್ಲಿ ಹೇರಿ ತನ್ನ ಠಾಣ್ಯಕ್ಕೆ ಸಾಗಿಸಿದನಂತೆ! ಅಳಿದುಳಿದ ಗ್ರಂಥಗಳು ಬ್ರಿಟಿಷರ ಕಾಲದವರೆಗೂ ಅಂದರೆ 19ನೇ ಶತಮಾನದವರೆಗೂ ಅದೇ ಕಟ್ಟಡದಲ್ಲಿ ಇದ್ದವಂತೆ.

'ಸೌತ್ ಮಂಜಿತ್' ಇಬ್ರಾಹಿಮ್ ಆದಿಲ್ ಶಹನು ತನ್ನ ನಿವಾಸಕ್ಕಾಗಿ ಕಟ್ಟಿಸಿದ ಏಳು ಅಂತಸ್ತಿನ ಕಟ್ಟಡವಾಗಿತ್ತು. ವಾರದ ಏಳು ದಿನಗಳನ್ನು ಅದು

ಪ್ರತಿನಿಧೀಕರಿಸುತ್ತದೆ ಮತ್ತು ಸಮಯ ತಿಳಿಯಲು ಕ್ರಮವಹಿಸಿ ರಚಿಸಿದ ಗಡಿಯಾರದಂತಿದೆ! ಹೀಗೆಂದು ಅವನು ತನ್ನ ಗ್ರಂಥ 'ಕಿತಾಬ್-ಎ-ನವರಸ್'ದಲ್ಲಿ ಹೇಳಿಕೊಂಡಿದ್ದಾನೆ. ಏಳು ಅಂತಸ್ತುಗಳು ಏಳು ಸ್ವರಗಳಂತೆ ಎನ್ನುತ್ತಾನೆ ಅವನು. ಆ ಮಹಲಿನ ಅಷ್ಟೆತ್ತರದಲ್ಲಿ ಏರ್ಪಟ್ಟ ಸಂಗೀತ ಕೇಳಿ ಇಂದ್ರನ ಅಪ್ಸರೆಯರು ಮೂರ್ಛಿತರಾದರಂತೆ!

## ಇಬ್ರಾಹಿಮ್ ರೋಜಾ

'ಇಬ್ರಾಹಿಮ್ ರೋಜಾ'ವನ್ನು ಇಬ್ರಾಹಿಮ್ ಆದಿಲ್ ಶಹನು ತನ್ನ ಸಮಾಧಿಗಾಗಿ ಕಟ್ಟಿಸಿದ. ಇದು ಅತ್ಯಂತ ಸೂಕ್ಷ್ಮ ಕೆತ್ತನೆ, ವಿವಿಧ ಅಲಂಕಾರಿಕ ಲಿಪಿ ಶೈಲಿಗಳು ಹಾಗೂ ವರ್ಣಚಿತ್ರಗಳಿಂದ ರಚಿಸಲ್ಪಟ್ಟು ಪ್ರಸಿದ್ಧವಿದೆ. ಚಿನ್ನದ ಗಿಲೀಟಿನ ಕಮಾನುಗಳು ಗೋಪುರ, ಮಿನಾರ್‌ಗಳೊಂದಿಗೆ ಪದಕ ಸಹಿತ ಸರಪಳಿ ಪುಷ್ಪಕರಂಡಕ, ಧೂಪಾರತಿ ಗಳನ್ನೊಳಗೊಂಡ ವಿವಿಧ ವರ್ಣಮಯ ಲಿಪಿಶಾಸನಗಳಿವೆ. ಚೌಕಟ್ಟು ಮೂಲೆ ಜಾಲಂಧ್ರ ಬಾಗಿಲು ವಾಡಗಳ ಮೇಲೆಲ್ಲ ಸ್ವರ್ಗದ ಕಲ್ಪನೆ, ಕುರಾನದೊಳಗಿನ ವಾಕ್ಯಗಳು ಕಂಗೊಳಿಸುತ್ತವೆ. ದೈವಿಕ ಅನುಭೂತಿಯ ಸಂದೇಶ, ಅವುಗಳ ಸಂವಹನವನ್ನು ಸಮಾಧಿ ನಿರ್ಮಾಣದ ಉದ್ದೇಶಕ್ಕೆ ಅನುಸಾರವಾಗಿ ಬಳಸಲಾಗಿದೆ. ಸ್ವರ್ಗದಲ್ಲಿ ದೊರೆಯುವ ಸುಖ-



ಇಬ್ರಾಹಿಮ್ ರೋಜಾ

ಶಾಂತಿ, ಸಾಂತ್ವನಗಳ ಆಶ್ವಾಸನೆ ಸೂಕ್ತಿಗಳನ್ನು ಸವಿರಾದ ರೇಖಾವಿನ್ಯಾಸಗಳಿಂದ ಜೋಡಿಸಲಾಗಿದೆ. ಸರಿಹೊಂದುವ ವರ್ಣ ಸಂಯೋಜನೆಯಲ್ಲಿ ಲಿಪಿವೈವಿಧ್ಯಗಳನ್ನೂ ಮೂಡಿಸಲಾಗಿದ್ದು ಭಾರತದ ಅಪ್ರತಿಮ ಕಲಾತ್ಮಕ ಕಟ್ಟಡಗಳಲ್ಲಿ ಇಬ್ರಾಹಿಮ್ ರೋಜಾದ ಸೇರ್ಪಡೆ ಆಗುತ್ತದೆ.

## ಗೋಲ್‌ಗುಮ್ಮಟ

ಇಬ್ರಾಹಿಮ್ ಆದಿಲ್ ಶಹನ ಮಗನಾದ ಮೂರನೆಯ ಮುಹಮ್ಮದನು (1626–1656) ತನ್ನ ಸಮಾಧಿಗೆಂದು ಕಟ್ಟಿಸಿದ ಗೋಲ್‌ಗುಮ್ಮಟ, ವಿಶ್ವದ ಇಂಜಿನಿಯರಿಂಗ್ ಚಮತ್ಕಾರಿಕ ಕಟ್ಟಡಗಳಲ್ಲಿ ಒಂದಾಗಿದೆ. ಕಂಬಗಳೇ ಇಲ್ಲದೆ ನಾಲ್ಕು ಗೋಡೆಗಳಿಂದ ಕೂಡಿ ಅತೀ ದೊಡ್ಡ ಗುಮ್ಮಟವನ್ನು ಹೊಂದಿದೆ. ಇದರ ಆಶ್ರಯದ ಹಜಾರವೇ 18,000 ಚದರ ಅಡಿ ಪ್ರದೇಶವನ್ನು ಆಕ್ರಮಿಸಿದೆ. ಗುಮ್ಮಟವು ಏಷ್ಯ ಖಂಡದಲ್ಲೇ ದೊಡ್ಡದು. ಪಿಸುಮಾತನ್ನೂ ಏಳುಬಾರಿ ಪ್ರತಿಧ್ವನಿಸುವ ಅದ್ಭುತ ಗ್ಯಾಲರಿಗಳನ್ನು ಹೊಂದಿರುವ ಈ ಕಟ್ಟಡ ಮಧ್ಯಯುಗದ ವಾಸ್ತುಶಿಲ್ಪದ ಉಚ್ಚತಮ ಸಾಹಸದ ಮಾದರಿ ಅನಿಸಿಕೊಳ್ಳುತ್ತದೆ. ದಕ್ಷಿಣ ಭಾರತದ ತಾಜಮಹಲ್ ಎಂದು ಕರಸಿಕೊಂಡಂತೆ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಕರ್ನಾಟಕದ ಹೆಮ್ಮೆಯ ಮಾದರಿಯಾಗಿದೆ.



ಗೋಲ್‌ಗುಮ್ಮಟ, ಬಿಜಾಪುರ

## ಪೇಟೆ ಮಳಿಗೆಗಳು ಮತ್ತು ಜನಜೀವನ

ಬಿಜಾಪುರ ರಾಜ್ಯಕ್ಕೆ ಬಂದಿದ್ದ ಹಲವು ವಿದೇಶೀಯರು ಅಲ್ಲಿಯ ವೈಭವದ ಕುರಿತು ಬರೆದ ವೃತ್ತಾಂತಗಳಿವೆ. ಸಾಮ್ರಾಟ್ ಅಕ್ಬರನ ರಾಯಭಾರಿಯಾಗಿ ಬಂದಿದ್ದ ಮಿರ್ಝಾ ಅಸದ್ ಬೇಗ್‌ನ ವೃತ್ತಾಂತದ ಭಾಗವನ್ನು ಆಯ್ಕೆ ಮಾಡಲು ಕಾರಣವೆಂದರೆ ಅಂದಿನ ಮೊಗಲರ ರಾಜಧಾನಿ ಮತ್ತು ಇತರ ಮುಖ್ಯ ಪಟ್ಟಣಗಳು ಪ್ರಪಂಚದ ಹಲವು ದೇಶಗಳ ಚರಿತ್ರೆಯಲ್ಲಿ ಉಲ್ಲೇಖಿಸಲ್ಪಟ್ಟಿವೆ. ಅವುಗಳ ಬೆಡಗು ವೈಭವಗಳು ವರ್ಣಿಸಲ್ಪಟ್ಟಿವೆ. ಮಿರ್ಝಾ ಅಸದ್ ಬೇಗ್‌ನು ಆ ವೈಭವಕ್ಕೆ ಪ್ರತ್ಯಕ್ಷದರ್ಶಿಯಾಗಿದ್ದನಷ್ಟೆ? ಸಂಪದ್ಭರಿತ ಮೊಗಲ್ ಪಟ್ಟಣಗಳು ಅವನಿಗೆ ಚಿರಪರಿಚಿತವಿದ್ದವು. ಆದರೂ ದಖ್ಖನದ ಮಕುಟಮಣಿಯಂತಿದ್ದ ಬಿಜಾಪುರದ ಸ್ವಚ್ಛತೆ-ಮೆರಗುಗಳಿಗೆ ಮಾರುಹೋಗಿದ್ದ. ಆತ ಬರೆದಿಟ್ಟ ವರದಿಯಲ್ಲಿ ಪೇಟೆಯ ವರ್ಣನೆ ಹೀಗಿದೆ:

"ಬಿಜಾಪುರದ ಹವೆ ಆಹ್ಲಾದಕರವಾಗಿತ್ತು. ಅಲ್ಲಿಯ ಪೇಟೆಗಳೋ 90 ಘೂಟು ಅಗಲದ ಮಳಿಗೆಗಳು, ಎರಡು ಕೋರ್ಸ್ (6ಮೈಲು) ದೂರದವರೆಗೆ ಹರಡಿದ್ದವು. ಇಕ್ಕೆಲ್ಲದಲ್ಲಿ ಝಗಝಗಿಸುವ ಬೆಳಕಿನಡಿ, ಬಲುವಿರಳವಾದ ಸಾಮಗ್ರಿಗಳನ್ನು ಹೊಂದಿದ ಅಂಗಡಿಗಳಿದ್ದವು. ನಾನು ಈವರೆಗೆ ಕೇಳಿರದ, ಕಂಡಿರದವು! ಪ್ರತಿ ಅಂಗಡಿಯ ಮುಂದೆಯೂ ಸುಂದರವಾದ ವೃಕ್ಷರಾಶಿಯಿತ್ತು. ಬಣ್ಣ ಬಣ್ಣದ ಬಟ್ಟೆಗಳ ಜವಳಿ ಅಂಗಡಿಗಳು, ಆಭರಣಗಳು, ಪೇಯಗಳು, ಖಾದ್ಯಗಳು, ಮೀನು-ಮಾಂಸದ ಅಂಗಡಿಗಳು, ಸಿದ್ಧ ಮಳಿಗೆಗಳು ಅಲ್ಲಿದ್ದವು. ಜೊತೆಗೆ ಬೇಕಾದ ತಿಂಡಿಗಳನ್ನು ಆಗಿಂದಾಗ್ಗೆ ಮಾಡಿಕೊಡುವ ಪಾಕ ವಿಶಾರದರು ಇದ್ದರು.

"ಆಭರಣಗಳ ಅಂಗಡಿಗಳಲ್ಲಿ ರತ್ನ ಖಚಿತ ಕನ್ನಡಿಗಳು, ಚಾಕು-ಚೂರಿ ಕಠಾರಿಗಳಲ್ಲದೇ ಗಿಳಿ, ನವಿಲು, ಪಾರಿವಾಳ ಮುಂತಾದ ಪಕ್ಷಿಗಳ ಪ್ರತಿಕೃತಿಗಳು, ವಜ್ರ ಮತ್ತಿತರ ಹರಳುಗಳಲ್ಲಿ ಕೆತ್ತಿದವು ಇರುತ್ತಿದ್ದವು. ತಯಾರಿಸಿದ ತಿಂಡಿಗಳು ಒಂದೆಡೆ ಮಳಿಗೆಗಳಲ್ಲಿ ವ್ಯವಸ್ಥಿತವಾಗಿ ಜೋಡಿಸಿಟ್ಟವುಗಳು ಕಂಡುಬಂದವು. ಮದ್ಯದಂಗಡಿಗಳಲ್ಲಿ ಅಪರೂಪದ ಪಾನ ಪ್ರಕಾರಗಳು ಇದ್ದವು. ಚೀನಾ ದೇಶದ ಪಿಂಗಾಣಿಯ ಬಣ್ಣ ಬಣ್ಣದ ಪಾನ ಪಾತ್ರೆಗಳು, ಬಟ್ಟಲುಗಳು ಕಂಗೊಳಿಸುತ್ತಿದ್ದವು. ಹಣ್ಣುಗಳ ಪ್ರಕಾರಗಳು ಎಷ್ಟೊಂದು ದೇಶ-ವಿದೇಶಗಳ ಮಾದರಿಯವು. ತಾಜಾ ಮತ್ತು ಒಣಗಿಸಿದ ಬಾದಾಮು. ಪಿಸ್ತಾಗಳಂತಹವು ಸಕ್ಕರೆ ಪಾಕದಲ್ಲಿ ಕಾದಿಟ್ಟ ಹಣ್ಣುಗಳು ಇದ್ದವು.

"ಹಾಡುಗಾರರ, ನರ್ತಕರ ಬೀದಿಗಳಲ್ಲಿ ಸಾಲಂಕೃತ ತರುಣಿಯರು ಸಂಗೀತ, ನೃತ್ಯ ಕಾರ್ಯಕ್ರಮಕ್ಕೆ ಸಜ್ಜಾಗಿ ಕಾಯುತ್ತಿದ್ದರು. ಬಗೆ ಬಗೆಯ ವಾದ್ಯಗಳೂ ಅಲ್ಲಿದ್ದವು. ಸುಗಂಧ ದ್ರವ್ಯದ ಮಳಿಗೆಗಳು ಉತ್ತಮ ಮದ್ಯ ಪ್ರಕಾರಗಳು ಕಣ್ಸೆಳೆದವು.

"ಇನ್ನೊಂದು ಮುಖ್ಯ ಬೀದಿಯಲ್ಲಿ ಸಾವಿರಾರು ಜನ ತಿನ್ನುತ್ತ, ಕುಡಿಯುತ್ತ, ಹಾಡು, ನೃತ್ಯ, ತಮಾಷೆಯ ಪ್ರಸಂಗಗಳನ್ನು ಜೊತೆ ಜೊತೆಗೇ ಆಸ್ವಾದಿಸುತ್ತ ಇದ್ದರು. ಬೀದಿ ಜಗಳಕ್ಕೆ ಎಲ್ಲಿಯೂ ಆಸ್ಪದವಿರಲಿಲ್ಲ!"

ಜಗತ್ತಿನಲ್ಲಿ ಇಂಥ ಅಪರೂಪದ ನೋಟಗಳು ಬೇರಾವ ನಗರದಲ್ಲೂ ಕಂಡುಬರುತ್ತವೋ ಇಲ್ಲವೋ! ಎಂದು ಅಸದ್ ಬೇಗ್‌ನು ಉದ್ಗರಿಸಿದ್ದಾನೆ. ಅಕ್ಬರ ಬಾದಶಹನಿಗಾಗಿ ಬೆಲೆಯುಳ್ಳ ಪುಷ್ಪರಾಗದ ಹರಳುಗಳನ್ನೂ ರತ್ನ ಖಚಿತ ಪಕ್ಷಿಗಳನ್ನೂ ಆತ ಖರೀದಿಸಿದ. ಅಂದರೆ ಇಂಥ ವಸ್ತುಗಳು ಆಗ್ರಾದಲ್ಲಿ ಲಭ್ಯವಿರಲಿಲ್ಲ ಎಂದು ಅರ್ಥೈಸಬಹುದು.

ಪ್ರಜೆಗಳೆಲ್ಲ ಸಹಜರೀತಿಯಲ್ಲಿ ಭಾವೈಕ್ಯತೆಯನ್ನು ರೂಢಿಸಿಕೊಳ್ಳುವದರಲ್ಲಿ ನೇರ ಮತ್ತು ಪರೋಕ್ಷ ರೀತಿಯಲ್ಲಿ ಆದಿಲ್‌ಶಾಹಿ ಅರಸರು ಕಾರಣರಾಗಿದ್ದಾರೆ. ಸೂಫಿಸಂತರು ಕರ್ನಾಟಕದಲ್ಲಿ ನೆಲೆಸಲಿಕ್ಕೂ ಅವರು ಈ ನೆಲದ ರೀತಿ ರಿವಾಜುಗಳನ್ನು ತಮ್ಮವನ್ನಾಗಿಸಿಕೊಳ್ಳಲಿಕ್ಕೂ ಅವರ ಉದಾರ ನೀತಿಯೇ ಕಾರಣವಾಯಿತು. ಗಾಣಿಗಾಪುರದ ದತ್ತ ಪೀಠಕ್ಕೂ ಅಥಣಿಯ ಸಿದ್ದೇಶ್ವರ ಮಠಕ್ಕೂ ಆದಿಲ್‌ಶಾಹಿಗಳು ದಾನವಿತ್ತ ಶಾಸನಗಳಿವೆ. ಇನ್ನು ಉಲ್ಲೇಖವಿರದ ದತ್ತಿಗಳನ್ನು ಉತ್ತರ ಕರ್ನಾಟಕದ ಹಲವು ಸಂಸ್ಥೆಗಳಿಗೆ ಪೇಶವೇಗಳು ಮುಂದರಿಸಿಕೊಂಡು ಹೋದರಂತೆ.

ಮೂಲತಃ ಆದಿಲ್‌ಶಾಹಿಗಳು ಶಿಯಾ ಪಂಥದ ಅನುಯಾಯಿಗಳಾಗಿದ್ದರು. ಆದರೆ ಶಿಯಾ-ಸುನ್ನಿ ಒಳಭೇದಗಳಿಗೆ ಅವರು ಮಹತ್ವ ಕೊಡಲಿಲ್ಲ. ಮೊಹರಂ (ಹಬ್ಬ) ಶಿಯಾಗಳಿಗೆ ಶೋಕಾಚರಣೆಯ ಸಂದರ್ಭ; ಹಿಂದೂಗಳೂ ಅದನ್ನು ತಮ್ಮದನ್ನಾಗಿಸಿಕೊಂಡರು. ಹುಲಿವೇಷ ಧರಿಸಿ ಕುಣಿಯುವವರು, ಆ ರೀತಿ ಹುತಾತ್ಮರಿಗೆ ಹರಕೆ ಸಲ್ಲಿಸುವವರಲ್ಲಿ ಹಿಂದೂಗಳೇ ಸಾಕಷ್ಟು ಪ್ರಮಾಣದಲ್ಲಿ ಇರುತ್ತಿದ್ದರು. ಕರ್ಬಲದ ಹಾಡುಗಳು ಕನ್ನಡ ಜಾನಪದ ರೂಪ ಪಡೆದವು. ಹೀಗೆ ಶಿಷ್ಟ ರೂಪದ ಕಲೆಗಳಿಂದ, ಜಾನಪದ ಪ್ರಕಾರದ ಪೂಜೆ ಪುರಸ್ಕಾರ, ಸಾಹಿತ್ಯದ ಬೆಳವಣಿಗೆಯತನಕ ಆದಿಲ್ ಶಾಹಿಗಳ ಧರ್ಮಸಹಿಷ್ಣುತೆಯ ಮಾದರಿಗಳನ್ನು ಕಾಣಬಹುದಾಗಿದೆ.

# 12

# ಚಾಂದ್ ಸುಲ್ತಾನಾಗೆ ಕವನಾಂಜಲಿ

ಭಾರತದ ದೀರ್ಘವಾದ ಮುಸ್ಲಿಂ ಆಡಳಿತಾವಧಿಯಲ್ಲಿ ಮಹಿಳೆಯರು ಆಳಿದ್ದು ಅಪರೂಪ. ಸುಲ್ತಾನಾ ಎಂದು ಗುರುತಿಸಲ್ಪಟ್ಟವಳು ಒಬ್ಬಳೇ! ದಿಲ್ಲಿಯ ಗುಲಾಮ ವಂಶದ ಸುಲ್ತಾನಾ ರಝಿಯಾ ಬೇಗಂ (1236–1240). ತಂದೆಯಿಂದಲೇ ತನ್ನ ಉತ್ತರಾಧಿಕಾರಿ ಎಂದು ಘೋಷಿಸಲ್ಪಟ್ಟವಳು. ಅವಳೂ ಲೆಕ್ಕವಿಲ್ಲದಷ್ಟು ಷಡ್ಯಂತ್ರಗಳನ್ನು, ಒಳಜಗಳಗಳನ್ನು ಎದುರಿಸಬೇಕಾಗಿ ಬಂದು ಕೊನೆಗೂ ಬಲಿಯಾದಳು. ಚಾಂದ್ ಬೀಬಿಯು ರೀಜಂಟ್ ಆಗಿ ಎರಡು ರಾಜ್ಯಗಳನ್ನು ತೀರ ಭಿನ್ನ ಸ್ಥಿತಿಯಲ್ಲಿ ಆಳಬೇಕಾಗಿ ಬಂದು ಷಡ್ಯಂತ್ರಗಳು ಕೊಲೆಗಳು, ಯಾದವೀಕಲಹಗಳಿಗೆ ಸಾಕ್ಷಿಯಾದಳು. ಆದರೆ ಅಕ್ಬರನಂಥ ಪ್ರಸಿದ್ಧ ಮೊಗಲ್ ಬಾದಶಹನ ಸೈನ್ಯವನ್ನು ಸದೆ ಬಡೆದು, ಶೌರ್ಯವನ್ನು ಮೆರೆದು, ಆತನ ಮೆಚ್ಚುಗೆಗೆ ಪಾತ್ರಳಾಗಿ ಸುಲ್ತಾನಾ ಬಿರುದನ್ನು ಪಡೆದಳು! ಯುದ್ಧಕೌಶಲದೊಂದಿಗೆ ಪ್ರಜಾವಾತ್ಸಲ್ಯ, ಕಲಾ–ಸಾಹಿತ್ಯ–ಸಂಗೀತ ಪ್ರೇಮಿಯಾಗಿ ಅವನ್ನು ಬೆಳೆಸಿದಳು. ದಖ್ಖನದ ಶಾಹೀ ಅರಸರಲ್ಲೇ ಅನನ್ಯ ಕಲಾಪ್ರೇಮಿಯೆಂದು

ಖ್ಯಾತನಾದ ಚಾಂದ್ ಬೀಬಿಯ ಸಾಕುಮಗ, ಇಮ್ಮಡಿ ಇಬ್ರಾಹಿಮ್ ಆದಿಲ್ ಶಹನು ಪರ್ಶಿಯನ್ ಭಾಷೆಯಲ್ಲಿ ಬರೆದ ಕವನವೊಂದರಲ್ಲಿ ಮಾತೃಪ್ರೇಮವನ್ನು ಸೂರೆಗೊಂಡಿದ್ದಾನೆ. ಚಾಂದ್ ಬೀಬಿಯ ಧೀರ, ಸುಮಧುರ, ಕರುಣಾಳು ವ್ಯಕ್ತಿತ್ವ ಅದರಲ್ಲಿ ಬಿಂಬಿತವಾಗಿದೆ. ಅದರ ಕನ್ನಡ ಅನುವಾದವೇ ಈ ಅಪರೂಪದ ವೀರರಾಣಿಗೆ ನಾವು ಕೊಡಬಹುದಾದ ಕವನಾಂಜಲಿಯಾಗಿದೆ.

(ಇಂಗ್ಲಿಷ್ ಭಾಷಾಂತರ H.T. Silcoct KCS ಅವರದು)

ನಾಕದ ನಂದನದಲ್ಲಿ ಅಪ್ಸರೆಯರು ನಲಿವಲ್ಲಿ,
ಭೂಲೋಕದ ಪಂಡಿತರೆಲ್ಲ ನೆರೆಯುವಲ್ಲಿ
ಚೆಲುವು, ರಮ್ಯತೆ ವಿದ್ವತ್ತೆಗಳಲ್ಲಿ ನಮ್ಮೊಲವಿನ
ಚಾಂದ್ ಸುಲ್ತಾನಳನು ಸರಿಗಟ್ಟುವವರೆಲ್ಲಿ?

ಘೋರಯುದ್ಧಗಳಲ್ಲಾಕೆ ಧೈರ್ಯಗೆಟ್ಟವಳಲ್ಲ
ಸ್ನೇಹಶಾಂತಿಯ ಸಾಧು, ಸಭ್ಯತೆಯ ಬಿಟ್ಟವಳಲ್ಲ!
ಅವಳ ಮೃದು ನಿಲುವು ಚೆಲುವುಗಳಲ್ಲಿ
ಸರಿಸಮಾನರಾದವರಿಲ್ಲ.

ಹತಾಶರಾದವರಿಗೆಲ್ಲ ಹುರುಪನಿತ್ತವಳು
ಬೇಡಿ ಬಂದವರಿಗೆಲ್ಲ ದಾನವಿತ್ತವಳು
ಹೂಗಳರಸಿ, ಸಂಪಿಗೆಯ ಕಂಪಿನಂಥವಳು
ವೃಕ್ಷರಾಜ ಸೈಪ್ರಸ್‌ನ ನಿಲುವು ತಳೆದವಳು
ನಲಿವು, ಚೆಲುವುಗಳಲಿ ಶಿಖರಪ್ರಾಯಳು
ನಾಲಿಗೆ ಬಣ್ಣಿಸಲಾಗದ ಸೊಬಗ ಪಡೆದವಳು!
ಈ ಅನಾಥನ ಕಷ್ಟಗಳಲಿ ಬಿಡದೇ ಕಾಯ್ದವಳು
ಘನತೆವೆತ್ತ ಆ ಅರಸಿಗಿರಲಿ ಮುಡಿಪು
ಇಬ್ರಾಹಿಮನ ಈ ಸಾಲುಗಳು!

# 13

# ನಡೆದು ಬಂದ ದಾರಿ

1564 : ವಿವಾಹ – ಬಿಜಾಪುರದ ಮೊದಲನೆಯ ಅಲಿ ಆದಿಲ್ ಶಹನೊಂದಿಗೆ; ತಂದೆ–ತಾಯಿ: ಅಹಮ್ಮದ್ ನಗರದ ಮೂರನೆಯ ಹುಸೇನ್ ನಿಜಾಮ್ ಶಹ–ರಾಣಿ ಖುಂಝಾ ಹುಮಾಯೂನ್

1580 : ಪತಿ ಅಲಿ ಆದಿಲ್ ಶಹನ ಹತ್ಯೆ

1580–90 : ಬಿಜಾಪುರದ ರೀಜಂಟ್ ಆಗಿ ಚಾಂದ್ ಬೀಬಿ

1596–99 : ಅಹಮ್ಮದ್ ನಗರದ ರೀಜಂಟ್ ಆಗಿ ಚಾಂದ್ ಬೀಬಿ

1596 : ಮೊಗಲರಿಂದ ಅಹಮ್ಮದ್ ನಗರದ ಮೇಲೆ ಮುತ್ತಿಗೆ; ಚಾಂದ್ ಬೀಬಿಯ ದಿಟ್ಟತನದಿಂದ ಮೊಗಲರ ಹಿಂದೆಗೆತ

1599 : ಮೊಗಲರಿಂದ ಅಹಮ್ಮದ್ ನಗರದ ಮೇಲೆ ಎರಡನೆಯ ಮುತ್ತಿಗೆ; ಚಾಂದ್ ಬೀಬಿಯ ಅಂತ್ಯ

# ವಸಂತ ಪ್ರಕಾಶನ

## 'ವಿಖ್ಯಾತರ ವ್ಯಕ್ತಿಚಿತ್ರ ಮಾಲೆ'ಯಲ್ಲಿ ಹೊರತಂದಿರುವ ಪುಸ್ತಕಗಳು

| | | |
|---|---|---|
| 1. | ಮದರ್ ತೆರೆಸಾ | ಜಯಶ್ರೀ ಕಾಸರವಳ್ಳಿ |
| 2 | ಡಾ. ಎಸ್. ರಾಧಾಕೃಷ್ಣನ್ | ಮಹಾಬಲೇಶ್ವರ ರಾವ್ |
| 3. | ಪಂಡಿತ್ ಮದನ ಮೋಹನ ಮಾಳವೀಯ | ಬಿ.ಎಂ. ಚಂದ್ರಶೇಖರಯ್ಯ |
| 4. | ಆಲ್ಬರ್ಟ್ ಐನ್‌ಸ್ಟೈನ್ | ಸಿಡ್ನಿ ಶ್ರೀನಿವಾಸ್ |
| 5. | ಛತ್ರಪತಿ ಶಿವಾಜಿ | ನರೇಂದ್ರ ಕಟ್ಟಿ |
| 6. | ಮೈಕೆಲ್ ಫ್ಯಾರಡೆ | ಕೆ.ಟಿ. ಗಟ್ಟಿ |
| 7. | ಭಗವಾನ್ ಬುದ್ಧ | ಜಿ.ಎಂ. ಕೃಷ್ಣಮೂರ್ತಿ |
| 8. | ಮಾರ್ಟಿನ್ ಲೂಥರ್ ಕಿಂಗ್ ಜ್ಯೂನಿಯರ್ | ಕೆ.ಎನ್. ಪರಾಂಜಪೆ |
| 9. | ರವೀಂದ್ರನಾಥ ಠಾಕೂರ್ | ಚಿಂತಾಮಣಿ ಕೊಡ್ಲೆಕೆರೆ |
| 10. | ಕಿತ್ತೂರು ರಾಣಿ ಚೆನ್ನಮ್ಮ | ವಿಶ್ವನಾಥ ಎಂ. ಬಸವನಾಳಮಠ |
| 11. | ಅಜೀಮ್ ಪ್ರೇಮ್‌ಜಿ | ಅಮೃತ್ ಜೋಗಿ |
| 12. | ಜಮ್ಷೆಡ್ಜಿ ಟಾಟಾ | ನವರತ್ನ ಸುಧೀರ್ |
| 13. | ಕ್ಯಾಪ್ಟನ್ ಗೋಪಿನಾಥ್ | ಬಿ.ಎಸ್.ಜಯಪ್ರಕಾಶ ನಾರಾಯಣ |
| 14. | ವಂದನಾ ಶಿವ | ಮಹಾಬಲ ಸೀತಾಳಭಾವಿ |
| 15. | ಅಬ್ದುಲ್ ಕಲಾಮ್ | ನರೇಂದ್ರ ಕಟ್ಟಿ |
| 16. | ಸ್ಯಾಮ್ ಪಿತ್ರೋಡಾ | ವಿಶ್ವನಾಥ ಎಂ. ಬಸವನಾಳಮಠ |
| 17. | ಬಾಬಾ ಆಮ್ಟೆ | ಚಂದ್ರಕಾಂತ ಪೋಕಳೆ |
| 18. | ಅಣ್ಣಾ ಹಜಾರೆ | ರಘುನಾಥ ಚ.ಹ. |
| 19. | ಮೇಧಾ ಪಾಟ್ಕರ್ | ಹರೀಶ್ ಕೇರ |
| 20. | ಡಾ. ವಿಕ್ರಂ ಸಾರಾಭಾಯಿ | ಸಿ.ಆರ್. ಸತ್ಯ |
| 21. | ಎಂ.ಎಸ್. ಸುಬ್ಬುಲಕ್ಷ್ಮಿ | ಎನ್.ಎಸ್. ಕೃಷ್ಣಮೂರ್ತಿ |
| 22. | ಪಂ. ಭೀಮಸೇನ ಜೋಶಿ | ಎಸ್. ದಿವಾಕರ್ |
| 23. | ಪಂ. ಮಲ್ಲಿಕಾರ್ಜುನ ಮನಸೂರ | ವಿವೇಕಾನಂದ ಪಿ.ವಿ. |
| 24. | ಚಾರ್ಲಿ ಚಾಪ್ಲಿನ್ | ಎಚ್.ಎಸ್. ಮಂಜುನಾಥ |

| | | |
|---|---|---|
| 25. | ಶ್ರೀಕೃಷ್ಣದೇವರಾಯ | ನರೇಂದ್ರ ಕಟ್ಟೆ |
| 26. | ವಾಲ್ಟ್ ಡಿಸ್ನಿ | ಮಹಾಬಲೇಶ್ವರ ರಾವ್ |
| 27. | ಝಾನ್ಸಿರಾಣಿ ಲಕ್ಷ್ಮೀಬಾಯಿ | ನರೇಂದ್ರ ಕಟ್ಟೆ |
| 28. | ಸಚಿನ್ ತೆಂಡೂಲ್ಕರ್ | ವಿಶಾಖ ಎನ್. |
| 29. | ಎನ್. ಆರ್. ನಾರಾಯಣಮೂರ್ತಿ | ಅಮೃತ್ ಜೋಗಿ |
| 30. | ವಿಶ್ವನಾಥನ್ ಆನಂದ್ | ಮಾ.ವೆಂ.ಸ. ಪ್ರಸಾದ್ |
| 31. | ವಾರೆನ್ ಬಫೆಟ್ | ಮಹಾಬಲ ಸೀತಾಳಭಾವಿ |
| 32. | ರಮಣ ಮಹರ್ಷಿ | ಚಿಂತಾಮಣಿ ಕೊಡ್ಲೆಕೆರೆ |
| 33. | ಸರ್. ಎಂ. ವಿಶ್ವೇಶ್ವರಯ್ಯ | ಕೆ.ಎನ್ ಪರಾಂಜಪೆ |
| 34. | ಡಾ. ಯು. ಆರ್. ರಾವ್ | ಸಿ. ಆರ್. ಸತ್ಯ |
| 35. | ನೇತಾಜಿ ಸುಭಾಷ್‌ಚಂದ್ರ ಬೋಸ್ | ಬಿ.ಎಂ.ಚಂದ್ರಶೇಖರಯ್ಯ |
| 36. | ಡಾ.ಬಿ. ಆರ್. ಅಂಬೇಡ್ಕರ್ | ನರೇಂದ್ರ ಕಟ್ಟೆ |
| 37. | ನಾನಿ ಪಾಲ್ಖೀವಾಲಾ | ಹಾ.ರಾ |
| 38. | ಬಿಲ್ ಗೇಟ್ಸ್ | ರಘುನಾಥ ಚ.ಹ |
| 39. | ಅಬ್ರಹಾಂ ಲಿಂಕನ್ | ತೇಜಸ್ವಿನಿ ಹೆಗಡೆ |
| 40. | ಅಮಿತಾಬ್ ಬಚ್ಚನ್ | ಹ.ಚ. ನಟೇಶ್ ಬಾಬು |
| 41. | ಅರವಿಂದ ಕೇಜ್ರಿವಾಲ | ಅಮೃತ್ ಜೋಗಿ |
| 42. | ಕಿರಣ್ ಬೇಡಿ | ಬಿ.ಎಸ್. ಜಯಪ್ರಕಾಶ ನಾರಾಯಣ |
| 43. | ನೆಲ್ಸನ್ ಮಂಡೇಲ | ಕೆ. ಎನ್. ಪರಾಂಜಪೆ |
| 44. | ಆಂಗ್ ಸಾನ್ ಸೂಕಿ | ನರೇಂದ್ರ ಕಟ್ಟೆ |
| 45. | ಲತಾ ಮಂಗೇಶ್ಕರ್ | ಡಿ.ಎನ್. ಸುರೇಶ್ |
| 46. | ದೇವಿ ಪ್ರಸಾದ್ ಶೆಟ್ಟಿ | ರಘುನಾಥ ಚ.ಹ. |
| 47. | ಶ್ರೀಶಾರದಾದೇವಿ | ಲಿಂಗರಾಜು |
| 48. | ವರ್ಗೀಸ್ ಕುರಿಯನ್ | ಕೆ.ಎನ್. ಪರಾಂಜಪೆ |
| 49. | ಈಶ್ವರಚಂದ್ರ ವಿದ್ಯಾಸಾಗರ್ | ನರೇಂದ್ರಕಟ್ಟೆ |
| 50. | ಶ್ರೀನಿವಾಸ ರಾಮಾನುಜನ್ | ಸಿಡ್ನಿ ಶ್ರೀನಿವಾಸ್ |
| 51. | ಸುಂದರಲಾಲ್ ಬಹುಗುಣ | ಮಹಾಬಲ ಸೀತಾಳಭಾವಿ |
| 52. | ರಾಮಮನೋಹರ ಲೋಹಿಯಾ | ಕನ್ನಂಬಾಡಿ ಶಿವಶಂಕರ |

| | | |
|---|---|---|
| 53. | ಮೌಲಾನಾ ಅಬುಲ್ ಕಲಾಮ್ ಆಜಾದ್ | ನರೇಂದ್ರ ಕಟ್ಟಿ |
| 54. | ಡಾ.ಎಸ್. ರಾಧಾಕೃಷ್ಣನ್ | ಮಹಾಬಲೇಶ್ವರ ರಾವ್ |
| 55. | ವಿದ್ವಾನ್ ಮೈಸೂರು ಟಿ. ಚೌಡಯ್ಯ | ಎಸ್. ಕೃಷ್ಣಮೂರ್ತಿ |
| 56. | ದಲೈ ಲಾಮಾ | ಉಮಾ ರಾವ್ |
| 57. | ಸ್ವಾಮಿ ವಿವೇಕಾನಂದ | ಎಸ್.ಎ. ಶಾಮರಾವ್ |
| 58 | ಮ್ಯಾಕ್ಸ್ ಮುಲ್ಲರ್ | ಮಹಾಬಲೇಶ್ವರ ರಾವ್ |
| 59. | ಎಚ್. ನರಸಿಂಹಯ್ಯ | ಎಂ.ಕೆ. ಗೋಪಿನಾಥ್ |
| 60. | ಪಂಡಿತ್ ರವಿಶಂಕರ್ | ವಿವೇಕಾನಂದ ಪಿ.ವಿ. |
| 61. | ಅಮರ್ತ್ಯ ಸೆನ್ | ಎಲ್. ಶ್ರೀಧರಮೂರ್ತಿ |
| 62. | ಜಿಡ್ಡು ಕೃಷ್ಣಮೂರ್ತಿ | ಸಂತೋಷ ಅನಂತಪುರ |
| 63. | ಜವಾಹರಲಾಲ್ ನೆಹರೂ | ಎಂ.ಎಸ್. ರಘುನಾಥ್ |
| 64. | ಗೆಲಿಲಿಯೊ | ಸಿಡ್ನಿ ಶ್ರೀನಿವಾಸ್ |
| 65. | ಖಾನ್ ಅಬ್ದುಲ್ ಗಫಾರ್ ಖಾನ್ | ಕೆ.ಎನ್. ಪರಾಂಜಪೆ |
| 66. | ಸರ್ ಐಸಾಕ್ ನ್ಯೂಟನ್ | ಸಿಡ್ನಿ ಶ್ರೀನಿವಾಸ್ |
| 67. | ಲಾಲಾ ಲಜಪತರಾಯ್ | ಜಿ.ಎಸ್.ಭಟ್ಟ |
| 68. | ಮಹಾಕವಿ ಕಾಳಿದಾಸ | ಜಿ.ಎಂ. ಕೃಷ್ಣಮೂರ್ತಿ |
| 69. | ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ | ಬಿ.ಕೆ. ಗಣೇಶ್ |
| 70. | ಸರ್. ಸಿ.ವಿ. ರಾಮನ್ | ಶಶಿಧರ ವಿಶ್ವಾಮಿತ್ರ |
| 71. | ಬಸವರಾಜ ರಾಜಗುರು | ಆಶಾ ಹೆಗಡೆ |
| 72. | ಗುಬ್ಬಿ ವೀರಣ್ಣ | ಕೆ.ಎನ್. ಭಗವಾನ್ |
| 73. | ಇಂದಿರಾ ಗಾಂಧಿ | ಶಾಂತಾರಾಮ ಸೋಮಯಾಜಿ |
| 74. | Anna Hazare (ಕನ್ನಡ ಮತ್ತು ಇಂಗ್ಲಿಷ್) | ಕನ್ನಡ: ರಘುನಾಥ ಚ.ಹ. English: Malathi Belur |
| 75. | ಮೇರಿ ಕ್ಯೂರಿ | ಸಿಡ್ನಿ ಶ್ರೀನಿವಾಸ್ |
| 76. | ನಾರಾಯಣ ಗುರು | ಚಿಂತಾಮಣಿ ಕೊಡ್ಲೆಕೆರೆ |
| 77. | ಅಲನ್ ಟ್ಯೂರಿಂಗ್ | ಸಿಡ್ನಿ ಶ್ರೀನಿವಾಸ್ |
| 78. | ಉಸ್ತಾದ್ ಬಿಸ್ಮಿಲ್ಲಾ ಖಾನ್ | ರಾಜಶೇಖರ ಜೋಗಿನ್ಮನೆ |

| | | |
|---|---|---|
| 79. | ಸ್ಟೀಫನ್ ಹಾಕಿಂಗ್ | ಬಿ.ಕೆ. ಗಣೇಶ್ |
| 80. | ಬಸವಣ್ಣ | ನರೇಂದ್ರ ಕಟ್ಟಿ |
| 81. | ಮಹರ್ಷಿ ವಾಲ್ಮೀಕಿ | ಕೆ.ಎಂ. ರಾಘವ ನಂಬಿಯಾರ್ |
| 82. | ಅಕ್ಕಮಹಾದೇವಿ | ಭಾಗ್ಯಶ್ರೀ. ಪಿ. |
| 83. | ಸರ್ವಜ್ಞಮೂರ್ತಿ | ಭಾಗ್ಯಶ್ರೀ. ಪಿ. |
| 84. | 'ಉಕ್ಕಿನ ಮನುಷ್ಯ' ಸರ್ದಾರ್ ವಲ್ಲಭಬಾಯಿ ಪಟೇಲ್ | ನರೇಂದ್ರ ಕಟ್ಟಿ |
| 85. | ನಾಡಪ್ರಭು ಕೆಂಪೇಗೌಡ | ನರೇಂದ್ರ ಕಟ್ಟಿ |
| 86. | ಅಲ್ಲಮಪ್ರಭು | ಭಾಗ್ಯಶ್ರೀ. ಪಿ. |
| 87. | ವೀರ ಸಾವರ್‌ಕರ್ | ಭಾಗ್ಯಶ್ರೀ. ಪಿ. |
| 88. | ಆಲ್ಫ್ರೆಡ್ ನೊಬೆಲ್ | ಸಿಡ್ನಿ ಶ್ರೀನಿವಾಸ್ |
| 89. | ಜೆಆರ್‌ಡಿ ಟಾಟಾ | ಎ.ಆರ್. ಭಟ್ |
| 90. | ಭಗತ್ ಸಿಂಗ್ | ನರೇಂದ್ರ ಕಟ್ಟಿ |
| 91. | ಡಾ. ರಾಜೇಂದ್ರ ಪ್ರಸಾದ್ | ಭಾಗ್ಯಶ್ರೀ. ಪಿ |
| 92. | ಚಾಂದ್ ಬೀಬಿ | ಡಾ. ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್ |

ವಿಖ್ಯಾತರ
# ವ್ಯಕ್ತಿಚಿತ್ರ ಮಾಲೆ

ವಸಂತ ಪ್ರಕಾಶನ ಪ್ರಕಟಿಸುತ್ತಿರುವ ಈ ವಿಖ್ಯಾತರ ವ್ಯಕ್ತಿಚಿತ್ರ ಮಾಲೆಯಲ್ಲಿ ಧರ್ಮ, ತತ್ವಶಾಸ್ತ್ರ, ಚರಿತ್ರೆ, ವಿಜ್ಞಾನ, ಅರ್ಥಶಾಸ್ತ್ರ, ಪರಿಸರ, ಉದ್ಯಮ, ರಾಜಕೀಯ, ಸಮಾಜ ಸುಧಾರಣೆ, ಸಾಹಿತ್ಯ, ಸಂಗೀತ, ಲಲಿತ ಕಲೆ, ಕ್ರೀಡೆ ಮೊದಲಾದ ಕ್ಷೇತ್ರಗಳಲ್ಲಿ ಹೊಸ ಹೊಸ ಆವಿಷ್ಕಾರಗಳನ್ನೂ ಅದ್ವಿತೀಯ ಸಾಧನೆಗಳನ್ನೂ ಮಾಡಿದ ಮೇಧಾವಿಗಳ ಜೀವನಚಿತ್ರಗಳಿವೆ. ಇವುಗಳಲ್ಲಿ ಪ್ರತಿಯೊಬ್ಬ ಮೇಧಾವಿಯ ವಿಚಾರಗಳನ್ನು ಅವರ ಕಾಲದ ಸಾಮಾಜಿಕ ಹಾಗೂ ಬೌದ್ಧಿಕ ಪರಿಸರದಲ್ಲಿಟ್ಟು ವಿಶ್ಲೇಷಿಸಲಾಗಿದೆ. ಸಮಾಜದ ಮೇಲೆ ಆ ಮೇಧಾವಿ ಬೀರಿದ ಪ್ರಭಾವ, ಮನುಷ್ಯನನ್ನೂ ಪರಿಸರವನ್ನೂ ಅರ್ಥಮಾಡಿಕೊಳ್ಳುವ ದಿಸೆಯಲ್ಲಿ ಅವರು ನೀಡಿರುವ ನಿರ್ದಿಷ್ಟ ಕೊಡುಗೆ, ಅವರ ವಿಚಾರಗಳ ಸ್ಫೂರ್ತಿಯಿಂದ ರೂಪುಗೊಂಡಿರುವ ಜೀವನಕ್ರಮ, ಇವುಗಳನ್ನೂ ವಿವರಿಸಲಾಗಿದೆ. ಸಾಧ್ಯವಾದ ಕಡೆಗಳಲ್ಲೆಲ್ಲ ಮೇಧಾವಿಗಳ ಮಾತುಗಳಿಂದ, ಬರವಣಿಗೆಗಳಿಂದ ಸೂಕ್ತವೆಂದು ಕಂಡುಬಂದ ಭಾಗಗಳನ್ನು ಉದ್ಧರಿಸಲಾಗಿದೆ. ಹೊಸ ಸಿದ್ಧಾಂತಗಳನ್ನು ಸೃಷ್ಟಿಸಿದವರ, ಹೊಸ ಚಳವಳಿಗಳನ್ನು ಸ್ಥಾಪಿಸಿದವರ, ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮಹತ್ವದ ಪ್ರಭಾವವೂ ಘನತೆಯೂ ಇದ್ದು, ಹೊಸ ಆವಿಷ್ಕಾರಗಳನ್ನೋ ಅದ್ವಿತೀಯ ಸಂಯೋಜನೆಯನ್ನೋ ಮಾಡಿದವರ ಬಗೆಗೆ ವಿಶೇಷ ಗಮನ ನೀಡಲಾಗಿದೆ. ಒಟ್ಟಿನಲ್ಲಿ ಈ ಪುಸ್ತಕಗಳು ಸಂತೋಷದಿಂದ ಓದಬಲ್ಲ ಕೃತಿಗಳಾಗಿರುವಂತೆಯೇ ನಮ್ಮ ನಾಗರಿಕತೆಯನ್ನು, ಅದರ ವಿಕಾಸದ ವೈಚಾರಿಕ ಹಾಗೂ ಆಧ್ಯಾತ್ಮಿಕ ಸ್ರೋತಗಳನ್ನು, ಭವಿಷ್ಯದ ಒಲವು ನಿಲುವುಗಳನ್ನು ಆಳವಾಗಿ ಅರಿಯಲು ಸಹಾಯಕವಾಗಿವೆ. ಇವುಗಳನ್ನು ಓದುವ ಮೂಲಕ ತಮ್ಮ ಜೀವನದರ್ಶನ ಏನೆಂದು ಸ್ಪಷ್ಟಪಡಿಸಿಕೊಳ್ಳಬಲ್ಲ ಕೆಲವರಾದರೂ ಭವಿಷ್ಯದಲ್ಲಿ ಸ್ವತಃ ಮೇಧಾವಿಗಳಾದರೆ ಆಶ್ಚರ್ಯವಿಲ್ಲ.

ಜೀವನ ಚರಿತ್ರೆ / Biography

ISBN 93-86278-86-3







ರೂ. 40